# ಸಂಡೂರು ಕ್ಷೇತ್ರದ ಶ್ರೀ ಗಂಡಿ ಲಕ್ಷ್ಮಿ ನರಸಿಂಹಸ್ವಾಮಿ: ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)

ಸಂಶೋಧಕ
ನಾಗಭೂಷಣ.ಹೆಚ್

ಮಾರ್ಗದರ್ಶಕರು
ಡಾ||ಸ.ಚಿ. ರಮೇಶ್
ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮ - ೨೦೦೯

# ಸಂಡೂರು ಕ್ಷೇತ್ರದ ಶ್ರೀ ಗಂಡಿ ಲಕ್ಷ್ಮಿ ನರಸಿಂಹ ಸ್ವಾಮಿ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)



ಸಂಶೋಧಕ
ನಾಗಭೂಷಣ.ಹೆಚ್

ಮಾರ್ಗದರ್ಶಕರು
ಡಾ॥ಸ.ಚಿ. ರಮೇಶ್
ಪ್ರಾಧ್ಯಾಪಕರು





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

೨೦೦೮ – ೨೦೦೯

# ಪ್ರಮಾಣ ಪತ್ರ

'ಸಂಡೂರು ಕ್ಷೇತ್ರದ ಶ್ರೀ ಗಂಡಿ ಲಕ್ಷ್ಮಿ ನರಸಿಂಹಸ್ವಾಮಿ ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯ ಸಂಶೋಧನ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ॥ ಸ.ಚಿ. ರಮೇಶ್‌ಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲೀ ಅಥವಾ ಇತರೆ ಯಾವುದೇ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ನಾಗಭೂಷಣ.ಹೆಚ್.

(ನಾಗಭೂಷಣ.ಹೆಚ್)
ಸಂಶೋಧಕ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯದ ಹಂಪಿ
ವಿದ್ಯಾರಣ್ಯ – ೫೮೩೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೭.೧೦.೨೦೦೬

# ದೃಢೀಕರಣ ಪತ್ರ

ಶ್ರೀ ನಾಗಭೂಷಣ.ಹೆಚ್ ಇವರು **ಸಂಡೂರು ಕ್ಷೇತ್ರದ ಶ್ರೀಗಂಡಿ ಲಕ್ಷ್ಮಿ ನರಸಿಂಹಸ್ವಾಮಿ ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಶೋಧನ ಪ್ರಬಂಧವನ್ನು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಲಿ ಬಳಸಿಕೊಂಡಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**(ಡಾ॥ ಸ.ಚಿ.ರಮೇಶ್)**
ಮಾರ್ಗದರ್ಶಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯದ ಹಂಪಿ
ವಿದ್ಯಾರಣ್ಯ – ೫೮೩೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೨.೧೦.೨೦೦೮.

# ಪರಿವಿಡಿ

## ಸಂಡೂರು ಕ್ಷೇತ್ರದ ಶ್ರೀಗಂಡಿಲಕ್ಷ್ಮಿನರಸಿಂಹಸ್ವಾಮಿ ಸಾಂಸ್ಕೃತಿಕ ಅಧ್ಯಯನ

## ಅಧ್ಯಾಯ – ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಜಾನಪದ ಇಂದು ವೈಜ್ಞಾನಿಕ ಹಾಗು ಸಾಂಸ್ಕೃತಿಕ ನೆಲೆಗಳಲ್ಲಿ ಶಿಸ್ತಿನಿಂದ ಅಧ್ಯಯನಕ್ಕೆ ಒಳಗಾಗಿದೆ. ನಾಡಿನಾದ್ಯಂತ ಲಭ್ಯವಿರುವ ಜನಾಂಗ, ಆಚರಣೆ, ಸಂಸ್ಕೃತಿ ಭಾಷೆಗಳನ್ನು ಕುರಿತು ಅಧ್ಯಯನವಾದಂತೆ ಒಂದು ಪ್ರದೇಶದ ವದಂತಿ ಐತಿಹ್ಯಗಳನ್ನು ಕುರಿತು ಹಲವು ನಿಟ್ಟಿನಲ್ಲಿ ಅಧ್ಯಯನ ಮಾಡುವುದರ ಮೂಲಕ ತನ್ನ ವ್ಯಾಪ್ತಿಯನ್ನು ಹಿಗ್ಗಿಸಿಕೊಂಡಿದೆ. ಹೀಗಾಗಿ ಜಾನಪದ ಅಧ್ಯಯನ ಕ್ಷೇತ್ರಕ್ಕೆ ಒಳಗಾಗದ ವಿಷಯವೇ ಇಲ್ಲ ಎನ್ನುವಷ್ಟರಮಟ್ಟಿಗೆ ಬೆಳೆದು ನಿಂತಿದೆ. ಹಬ್ಬ - ಆಚರಣೆಗಳು, ಜಾತ್ರೆ – ಉತ್ಸವಗಳು, ಕೃಷಿ–ಜಾನಪದ ಮುಂತಾದ ಶೀರ್ಷಿಕೆಗಳಲ್ಲಿ ಸಮಗ್ರ ಹಾಗೂ ಪ್ರೌಢವಾಗಿ ಅಧ್ಯಯನಗಳು ನಡೆದಿವೆ. ಇದರಿಂದ ಒಂದು ಪ್ರದೇಶದ ಜಾನಪದೀಯರ ಬದುಕಿನ ವೈವಿಧ್ಯತೆಗಳನ್ನು ಗುರುತಿಸಲು ಸಾಧ್ಯವುವಾಗಿದೆ. ಅನೇಕ ಸಣ್ಣಪುಟ್ಟ ವಿಷಯಗಳು ಅಧ್ಯಯನ ಯೋಗ್ಯವಾದ ಚರಿತ್ರೆಯನ್ನು ತನ್ನ ಒಡಲಲ್ಲಿ ಇರಿಸಿಕೊಂಡಿದೆ. ಅಂತಹುಗಳಲ್ಲಿ ಸಂಡೂರು ಕ್ಷೇತ್ರದ ಶ್ರೀ ಗಂಡಿ ಲಕ್ಷ್ಮಿನರಸಿಂಹಸ್ವಾಮಿ ಸಾಂಸ್ಕೃತಿಕ ಅಧ್ಯಯನ ಒಂದು.

ಶ್ರೀ ಗಂಡಿ ಲಕ್ಷ್ಮಿನರಸಿಂಹಸ್ವಾಮಿ ಆಚರಣೆ, ಆರಾಧನೆ ಜನರಲ್ಲಿ ತಮ್ಮದೇ ಆದ ನಂಬಿಕೆ ಇದೆ. ಈ ದೇವರ ಬಗ್ಗೆ ಸುಮಾರು ೮೦೦ ವರ್ಷಗಳ ಇತಿಹಾಸವಿದೆ. ಶ್ರೀ ರಾಮನಿಂದ ಪ್ರತಿಷ್ಠಾಪಿಸಲ್ಪಟ್ಟು, ಅವನಿಂದಲೇ ಪೂಜೆಗೊಂಡ ಹಲವು ತೀರ್ಥಗಳಲ್ಲಿ ಒಂದಾದ ಗಜಗೊಂಡ ತೀರ್ಥ ಶ್ರೀ ಗಂಡಿ ಲಕ್ಷ್ಮಿನರಸಿಂಹಸ್ವಾಮಿ ದೊಡ್ಡ ಹೆಬ್ಬಂಡೆಯ ಗುಹೆಯಲ್ಲಿ ಮೂರ್ತಿ ಒಡಮೂಡಿರುವುದರಿಂದ, ಅಥವಾ ಗುಡ್ಡದ

ಮಧ್ಯೆ ನೀರು ಹರಿದು ಕಂಡಿ ಬಿದ್ದಿರುವುದರಿಂದ, ಅಲ್ಲಿಯೇ ದೇವಾಲಯವಿರುವುದರಿಂದ ಗಂಡಿನರಸಿಂಹ ಎಂದು ಕರೆಯುತ್ತಾರೆ.

ಶ್ರೀ ಗಂಡಿ ನರಸಿಂಹಸ್ವಾಮಿ ಉಗ್ರರೂಪ ತಾಳಿದ್ದರಿಂದ, ಅಲ್ಲಿಯ ಜನರು ಲಕ್ಷ್ಮಿಯ ಮೂರ್ತಿಯನ್ನು ಪೂಜಿಸಿದರು. ಅಂದಿನಿಂದ ಶಾಂತ ರೀತಿಯ ರೂಪವನ್ನು ಕಾಣಬಹುದು. ಪ್ರತಿವರ್ಷ ಹೋಳಿ ಹುಣ್ಣಿಮೆದಿನ ಜಾತ್ರೆ ಜರುಗುತ್ತದೆ. ಅನೇಕ ದೂರದ ಊರುಗಳಿಂದ ಹಾಗು ಸುತ್ತಮುತ್ತಲಿನ.

ಊರುಗಳಿಂದ ಜಾತ್ರೆಗೆ ಜನರು ಸೇರುತ್ತಾರೆ. ನಾಲ್ಕೈದು ದಿನಗಳವರೆಗೆ ಜಾತ್ರೆ ಜರುಗುತ್ತದೆ. ಪ್ರತಿದಿನ ಒಂದೊಂದು ಧಾರ್ಮಿಕ ಕಾರ್ಯಕ್ರಮಗಳು ಇರುತ್ತವೆ. ಉದಾ: ಕಲ್ಯಾಣೋತ್ಸವ, ಅನ್ನದಾಸೋಹ, ಬ್ಯಾಟಿಮರ, ತೇರು ಮುಂತಾದ ಚಟುವಟಿಕೆಗಳು ಇರುತ್ತವೆ. ಇಂತಹ ಅನೇಕ ಸಾಂಸ್ಕೃತಿಕ ಅಂಶಗಳು ವೈಶಿಷ್ಟತೆಗಳನ್ನು ತಿಳಿಯಲು ಶಾಶ್ವತವಾಗಿ ಉಳಿಯಲು ಶ್ರೀ ಗಂಡಿ ಲಕ್ಷೀನರಸಿಂಹ ಸ್ವಾಮಿಯ ಅಧ್ಯಯನದ ಬಹುಮುಖ್ಯ ಉದ್ದೇಶವಾಗಿದೆ.

**ನರಸಿಂಹ ಸ್ವಾಮಿ ಸಂಸ್ಕೃತಿ:–**

ಸಂಡೂರು ನಾಡಿನಲ್ಲಿ ವಿವಿಧ ರೀತಿಯ ಹಬ್ಬ ಆಚರಣೆಗಳನ್ನು ಆಚರಿಸುತ್ತಾರೆ. ಅವುಗಳಲ್ಲಿ ಹೋಳಿ ಹುಣ್ಣಿಮೆಯ ಸಂದರ್ಭದಲ್ಲಿ ಶ್ರೀ ಗಂಡಿಲಕ್ಷ್ಮಿನರಸಿಂಹಸ್ವಾಮಿಗೆ ಸಂಬಂಧಿಸಿದಂತೆ ಸಾಂಪ್ರದಾಯಿಕ ಆಚರಣೆಗಳು ಸಂಡೂರಿನಲ್ಲಿ ಆಚರಿಸಲ್ಪಡುತ್ತವೆ. ನರಸಿಂಹಸ್ವಾಮಿಗೆ ಸಂಬಂಧಿಸಿದ ಹಾಗೆ ಐದಾರು ದಿನಗಳವರೆಗೆ ನೆಡಯುವ ಕಾರ್ಯಕ್ರಮಗಳ, ಆಚರಣೆಗಳ ಸರ್ವ ಕಾರ್ಯಕ್ಕೂ ಪ್ರಥಮ ಪೀಠಿಕೆ. ಎಂಬಂತೆ ಹೋಳಿ ಹುಣ್ಣಿಮೆ ದಿನ ಕಂಕಣ ಧಾರಣ. ಅಂದರೆ ಕಲ್ಯಾಣೋತ್ಸವ ಮಾಡುತ್ತಾರೆ. ಎಲ್ಲಾ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಜವಾಬ್ದಾರಿಯುತವಾಗಿ ಕಾರ್ಯಕ್ರಮವನ್ನು ನೆರವೇರಿಸುತ್ತಾರೆವ ದೇವಸ್ಥಾನದಲ್ಲಿ ಹಂದರ

ಹಾಕುವುದು, ಉತ್ಸವ ಮೂರ್ತಿಯ ಮೆರವಣಿಗೆ,ಆಭರಣ ಪೂಜೆ, ಬಯಲು ಅಂಜಿನೇಯನ ಪೂಜೆ, ಬ್ಯಾಟಿಮರ ಇತ್ಯಾದಿ ಕಾರ್ಯಕ್ರಮಗಳು ಹೋಳಿ ಹುಣ್ಣಿಮೆ ಹಬ್ಬದಲ್ಲಿ ಜರಗುತ್ತವೆ.

ಈ ಎಲ್ಲಾ ಕಾರ್ಯಕ್ರಮಗಳು ಮುಗಿಯುವವರೆಗೂ ಭಕ್ತರು ದ್ರವ ರೂಪದ ಆಹಾರವನ್ನೇ ತೆಗೆದುಕೊಳ್ಳುತ್ತಾರೆ. ನಾವು ೨೧ನೇಶತಮಾನಗಳಿದ್ದರೂ ವೈಜ್ಞಾನಿಕವಾಗಿ ಬಹಳಷ್ಟು ಮುಂದುವರೆದಿದ್ದರೂ ಕೂಡ, ವೈಜ್ಞಾನಿಕವಾಗಿ ಸತ್ಯ ಎನ್ನುವ ಹಾಗೆ ಇಂತಹ ಆಚರಣೆಗಳು ಇಂದಿಗೂ ನಮ್ಮ ಜನಪದರಲ್ಲಿ ನಡೆಯುತ್ತವೆ. ಮನುಷ್ಯ ವಿಸ್ಮಯ ಪವಡಗಳನ್ನು ಮಾಡುತ್ತಾರೆ. ಯಾವುದೇ ರೀತಿಯ ಗಾಯಗಳು ಆಗುವುದಿಲ್ಲ ಬ್ಯಾಟಿಮರ ಸಂದರ್ಭದಲ್ಲಿ ಪೂಜಾರಿಗೆ ಎಚ್ಚರವಿರುವುದಿಲ್ಲವಂತೆ, ಮತ್ತೆ ಜೀವ ಕಳೆ ಬರುತ್ತದೆ ಎಂದು ಹೇಳುತ್ತಾರೆ.

ಯಾವುದೇ ಅಧ್ಯಯನ ಕೈಗೊಂಡರೂ ಅದಕ್ಕೊಂದು ಇತಿಮಿತಿ ಇದ್ದೇ ಇರುತ್ತದೆ. ಹಾಗೆಯೇ ಸಂಡೂರು ಶ್ರೀ ಗಂಡಿಲಕ್ಷ್ಮಿ ನರಸಿಂಹಸ್ವಾಮಿ ಅಧ್ಯಯನಕ್ಕೆ ಸಂಬಂಧಿಸಿದಂತೆ. ಕೆಲವು ಪ್ರಮುಖ ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಸಂಡೂರು ಕ್ಷೇತ್ರ, ಶ್ರೀ ಗಂಡಿಲಕ್ಷ್ಮಿ ನರಸಿಂಹಸ್ವಾಮಿ ಮತ್ತು ಆತನಿಗೆ ಸಂಬಂಧಿಸಿದ ಆಚರಣೆಗಳು ಇತರೆ ದೈವಗಳು, ಕಥೆ ಹಾಡು ಮತ್ತು ಹರಕೆ ಇವುಗಳ ವಿವರವಾದ ಮಾಹಿತಿ ಸಂಗ್ರಹಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಸಂಡೂರು ಕ್ಷೇತ್ರದ ಶ್ರೀ ಗಂಡಿ ಲಕ್ಷ್ಮಿನರಸಿಂಹಸ್ವಾಮಿ ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿದಂತೆ ವಿವರವಾದ ಮಾಹಿತಿಯನ್ನು ಸಂಪೂರ್ಣ ಕ್ಷೇತ್ರ ಕಾರ್ಯದ ಮುಖಾಂತರ ಸಂಗ್ರಹಿಸಿ ಆವುಗಳನ್ನು ಪರಿಶಿಲಿಸಿ, ಸಂಸ್ಕರಿಸಿ ಯೋಗ್ಯ ವಿಷಯಗಳನ್ನು ಸಂಗ್ರಹಿಸಿ. ಅಧ್ಯಯನಕ್ಕೆ ಒಳಪಡಿಸಲಾಗಿದೆ ಕ್ಷೇತ್ರ ಕಾರ್ಯ ವಿಧಾನವನ್ನು ಪ್ರಶ್ನಾವಳಿ ವೀಕ್ಷಣೆ, ಮತ್ತು ಸಂದರ್ಶನದ ಮುಖಾಂತರ ಕೈಗೊಳ್ಳಲಾಗಿದೆ. ಅಲ್ಲಲ್ಲಿ ಅಧ್ಯಯನಕ್ಕೆ ಪೂರಕವಾಗಿ ಕೆಲ ಗ್ರಂಥಗಳ ಬಳಕೆ ಮಾಡಿಕೊಂಡು ಪ್ರಬಂಧ ಸಿದ್ದಪಡಿಸಲಾಗಿದೆ.

ಶ್ರೀ ಗಂಡ ಲಕ್ಷ್ಮೀ ನರಸಿಂಹಸ್ವಾಮಿಯ ಅಧ್ಯಯನದ ವ್ಯಾಪ್ತಿಯು ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಸಂಡೂರು ಕ್ಷೇತ್ರದ ಧರ್ಮಾಪುರ ಗ್ರಾಮದ

ಮೂರು ಕಿಲೋ ಮೀಟರ್ ದೂರದಲ್ಲಿ ಈ ದೇವಾಲಯವಿದೆ. ಸಂಡೂರು ಎಂದರೆ ನಮಗೆ ನೆನಪಿಗೆ ಆಗುವುದು ಅಲ್ಲಿನ ಪರಿಸರ ಬೆಟ್ಟ – ಗುಡ್ಡ, ಹಳ್ಳ – ಕೊಳ್ಳ, ಖನಿಜ ಸಂಪತ್ತುಗಳಿಂದ ತನ್ನ ಸೌಂದರ್ಯವನ್ನು ಹೆಚ್ಚಿಸಿಕೊಂಡಿದೆ. ಹಾಗೂ ಹಲವಾರು ಪವಿತ್ರ ತೀರ್ಥಗಳಿಂದ ಕೂಡಿದೆ. ಸಂಡೂರು ಬಗ್ಗೆ ಭವ್ಯವಾದ ಪರಂಪರೆ ಮತ್ತು ಇತಿಹಾಸವಿದೆ.

ಶ್ರೀ ಗಂಡಿ ನರಸಿಂಹಸ್ವಾಮಿಯ ದೇವರ ಆಚರಣೆ, ನಂಬಿಕೆ , ಜಾತ್ರೆ ಮುಂತಾದ ವಿಷಯಗಳು ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಚರ್ಚಿತಗೊಳ್ಳಲಿವೆ. ಮುಖ್ಯವಾಗಿ ಕ್ಷೇತ್ರ ಕಾರ್ಯದಿಂದ ಮಾಹಿತಿಯನ್ನು ಸಂಗ್ರಹಿಸಬೇಕಾಗುತ್ತದೆ ಆದ್ದರಿಂದ ಸಂಶೋಧನೆಯ ವಿಧಿ – ವಿಧಾನಗಳನ್ನು ಅನುಸರಿಸಲಾಗಿದೆ. ಸಂಡೂರು ಕ್ಷೇತ್ರದಲ್ಲಿ ಪ್ರಮುಖ ದೇವಾಲಯಗಳ ಬಗ್ಗೆ ಜನರಿಗೆ ಮಾಹಿತಿ ದೊರಿಯದಂತೆಯುಗಿದೆ ಅದ್ದರಿಂದ ಇಂತಹ ಸಾಂಸ್ಕೃತಿಕ ಅಧ್ಯಯನಗಳಿಂದ ಹೊಸ ಹೊಸ ವಿಚಾರಗಳನ್ನು ತಿಳಿಯ ಬಹುದಾಗಿದೆ. ಇಂತಹ ಮುಖ್ಯ ದೇವಾಲಯ ಗುಂಪಿಗೆ ಸೇರುವ ಶ್ರೀ ಗಂಡಿ ನರಸಿಂಹಸ್ವಾಮಿ ಅಚಾರ ವಿಚಾರಗಳನ್ನು ಮುಂದಿನ ತಲೆ ಮಾರಿಗೆ ಕೊಂಡು ಒಯ್ಯಲು ಅನುಕೂಲವಾಗಿದೆ.

## ಅಧ್ಯಾಯ – ೨
## ಸಂಡೂರು ಭೌಗೋಳಿಕ ಕಿರುನೋಟ

ಸಂಡೂರು ಬಳ್ಳಾರಿ ಜಿಲ್ಲೆಯ ಮಧ್ಯಭಾಗದಲ್ಲಿದೆ. ಇದನ್ನು ಪೂರ್ವಭಾಗದ ತಾಲೂಕು ಎಂದು ಹೇಳಲಾಗುತ್ತಿದೆ. ಭೌಗೋಳಿಕವಾಗಿ ತನ್ನದೇ ಆದ ವೈಶಿಷ್ಟವನ್ನು ಹೊಂದಿದೆ. ನೈಸರ್ಗಿಕವಾಗಿ ಸಮೃದ್ಧವಾಗಿದೆ. ಆನೇಕ ಸಂಪತ್ತುಗಳನ್ನು ತನ್ನ ಗರ್ಭದಲ್ಲಿರಿಸಿಕೊಂಡಿದೆ. ಸುತ್ತಲೂ ದೊಡ್ಡ ದೊಡ್ಡಗುಡ್ಡಗಳು, ಸಣ್ಣ ಝರಿ ಹಳ್ಳಗಳಿಂದ ಕೂಡಿದ ನೀರಿನ ಸೆಲೆಗಳು, ಆದಿರಿನ ನಿಕ್ಷೇಪಗಳು, ಫಸಲು ಕೊಡುವ ಭೂ–ಭಾಗಗಳು ಇತಿಹಾಸ ಕಾಲದಿಂದಲೂ ಜೀವಿಗಳಿಗೆ, ಮಾನವನಿಗೆ ಸಹಕಾರಿಯಾದವುಗಳು. ಸಂಡೂರು ಬಳ್ಳಾರಿಯ ಮಲೆನಾಡಾಗಿದೆ.

ಮಹಾತ್ಮ ಗಾಂದೀಜಿಯವರು ಸಂಡೂರನ್ನು ನೋಡಿ ಅದರ ಸೌಂದರ್ಯಕ್ಕೆ ಮಾರು ಹೋಗಿ "ಮರುಭೂಮಿಯಲ್ಲಿಯ ಒಯಾಸಿಸ್" ಎಂದು ಉದ್ಗಾರ ತೆಗೆದರು ಹಲವಾರು ಪವಿತ್ರ ತೀರ್ಥಗಳಿಂದ ಕೂಡಿದೆ. "ಸೆಪ್ಟಂಬರ್ ತಿಂಗಳಲ್ಲಿ ಸಂಡೂರನ್ನು ನೋಡಿ," ವಿದೇಶಿ ಪ್ರವಾಸಿಗನೊಬ್ಬ ಹೇಳಿದ ಮಾತಿದು. ಇಂಥ ಸೌಂಥರ್ಯದ ಕಿರುನಾಡಿಗೆ ಪ್ರಾಚೀನ ಇತಿಹಾಸವಿದೆ. ಭವ್ಯ ಪರಂಪರೆಯಿದೆ.

## ೧.ಸಂಡೂರು ಪದನಿಷ್ಪತ್ತಿ:-

'ಸಂಡೂರು' ಸ್ಥಳನಾಮದ್ದ ನಿಷ್ಪತ್ತಿ ಹೇಗಾಯಿತು ಎಂಬುದರ ಬಗ್ಗೆ ಹಲವಾರು ಅಭಿಪ್ರಾಯಗಳನ್ನು ಕಾಣಬಹುದು. ಸಂಡೂರು 'ಸ್ಕಂದಪುರಿ' ಎಂಬ ಹೆಸರಿದ್ದು, ಮುಂದೆ ಅದೇ 'ಸಂಡೂರು' ಆಯಿತೆಂದು ಕೆಲವರು ಹೇಳಿದರೆ , 'ಸಂದೂರು' ನಿಂದ ಸಂಡೂರಾಯಿತೆಂದು ಕೆಲವರು ಹೇಳುತ್ತಾರೆ. ಸಂದುಗಳಿಂದ ಕಿರಿದಾದ ಓಣಿಗಳಿಂದ ಸಂಡೂರು ಕೂಡಿರುವುದರಿಂದ ಈ ಊರಿಗೆ 'ಸಂದೂರು' ಎಂಬ ಹೆಸರಾಯಿತೆಂದು ಕೆಲವರ ಅಬಿಪ್ರಾಯ. ಮತ್ತೆ ಕೆಲವರು ಈ ಊರಿಗೆ ಕಣಿವೆಗಳ ಮೂಲಕ ಪ್ರವೇಶವಿರುವುದರಿಂದ ಸಂದೂರು ಎಂಬ ಹೆಸರು ಬಂದಿದ್ದು, ಬ್ರಿಟೀಷರ ಇಂಗ್ಲೀಷ್ ಭಾಷೆಯಿಂದಾಗಿ 'ಸಂಡೂರು' ಆಯಿತೆಂದು ಹೇಳುತ್ತಾರೆ.

ಕ್ರಿ.ಶ ೧೨೬೯ರ ಶಾಸನದಲ್ಲಿ ಈ ಊರನ್ನು ಸ್ಪಷ್ಟವಾಗಿ 'ಸಂಡೂರು' ಎಂದು ಕರೆಯಲಾಗಿದೆ. ನಿಜ ನಿಷ್ಪತ್ತಿಯನ್ನು ಕುರಿತು ವಿವೇಚಿಸಿದಾಗ 'ಸಂಡೂರು' ಎಂಬುದು ದೇವತೆಯ ಹೆಸರಿನಿಂದಾಗಿ ಬಂದಿದ್ದು, ಕುಮಾರಸ್ವಾಮಿ ದೇವಾಲಯದ ಹೆಬ್ಬಾಗಿಲಿನ ಗೋಡೆಯ ಮೇಲಿನ ಶಾಸನದ ಅಕ್ಷರಗಳನ್ನು ಕದಂಬರ ಕಾಲದಲ್ಲಿ ಬಳಸುತ್ತಿದ್ದ ಅಕ್ಷರಗಳನ್ನು ಹೋಲುತ್ತವೆ. ಇಷ್ಟು ಪ್ರಾಚೀನವಾದ ಈ ದೇವತೆಯ ಮೂಲ ಹೆಸರು 'ಚಂಡಿ' ಇರಬೇಕು. ಈ ದೇವಾಲಯದ ಗೋಪುರದ ಮೇಲೆ ಚಂಡಿಯ ಸವೆದ ಮೂರ್ತಿ ಸ್ಪಷ್ಟವಾಗಿ ಇಂದಿಗೂ ಎದ್ದುಕಾಣುತ್ತದೆ. ಚಂಡಿ + ಊರು = ಚಂಡಿಯೂರು > ಚಂಡೂರು > ಸಂಡೂರು ಇಲ್ಲಿ 'ಚ' ಕಾರ, 'ಸ' ಕಾರವಾಗಿ ಸಂಡೂರಾಗಿದೆ.

## ೨.ಚಾರಿತ್ರಿಕ ಹಿನ್ನೆಲೆ:-

ಪ್ರಾಗ್ಯೈತಿಹಾಸಿ ಕಾಲದಿಂದ ಇಲ್ಲಿಯವರೆಗೆ ಈ ಪ್ರದೇಶ ಹಲವಾರು ರಾಜಕೀಯ ಸ್ಥಿತ್ಯಂತರಗಳನ್ನು ಕಂಡಿದೆ. ಉಪಲಬ್ಧ ಆಧಾರಗಳಿಂದ ಹೇಳುವುದಾದರೆ ಸಂಡೂರಿನ ಪ್ರದೇಶ ಸಿಂಧರು ಆಳುತ್ತಿದ್ದ ಸಿಂಧವಾಡಿ ೧೦೦೦ ವಿಭಾಗಕ್ಕೆ ಒಳಪಟ್ಟಿತ್ತು.

ಸಿಂಧವಾಡಿ ೧೦೦೦ ವಿಭಾಗದ ಉಪವಿಭಾಗದ ಬೆಲ್ಲಕುಂದೆ ೩೦೦ರ ಉಪವಿಭಾಗದ ದೊರವಡಿ ೭೦ ರಲ್ಲಿಯ ಒಂದು ಚಿಕ್ಕ ಗ್ರಾಮ ಈ ಸಂಡೂರು ದೊರವಾಡಿ ೭೦ ವಿಭಾಗದ ಮುಖ್ಯ ಪಟ್ಟಣ. ಇಂದಿನ 'ದರೋಜಿ' ಗ್ರಾಮ ಮುಂದೆ ಜರಮಲಿ ಪಾಳೆಗಾರರಿಗೆ ಸೇರಿದ ಒಂದು ಪಟ್ಟಣವಾಗಿತ್ತು. ಅನಂತರ ಘೋರ್ಪಡೆ ವಂಶಸ್ಥರು ಇದನ್ನು ವಶಪಡಿಸಿಕೊಂಡ ಮೇಲೆ ಸಂಡೂರು ಸಂಸ್ಥಾನದ ರಾಜಧಾನಿಯಾಯಿತು.

ಈ ಪ್ರದೇಶ ಕ್ರಮವಾಗಿ ಚಕ್ರವರ್ತಿಗಳಾದ ನಂದರು, ಮೌರ್ಯರು, ಗುಪ್ತರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು ಆಳಿದರು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಪೂರ್ವದಲ್ಲಿ ಸಂಡೂರಿಗೆ ಸಮೀಪವಿರುವ ಹೊಸಮಲೆದುರ್ಗ (ರಾಮನದುರ್ಗ, ರಾಮಗಡ)ವು ಕಂಪಿಲರಾಯ ಮತ್ತು ಆತನ ಮಗ ಕುಮರ ರಾಮನಿಗೆ ರಾಜಧಾನಿಯಾಗಿತ್ತು. ಕಂಪಿಲರಾಯ ಮತ್ತು ಕುಮಾರ ರಾಮನ ಇತಿಹಾಸವೇ, ಒಂದು ಬೃಹತೆ ಗ್ರಂಥವಾಗಿರುತ್ತದೆ. ಕುಮಾರರಾಮನು ದೆಹಲಿ ಸುಲ್ತಾನನೊಂದಿಗೆ ಹೋರಾಡುತ್ತಾ, ತನ್ನ ಪ್ರಾಣವನ್ನೇ ಕೊಡುತ್ತಾನೆ. ಈ ಯುದ್ಧದಲ್ಲಿ ಕಂಪಿಲರಾಯನೂ ಮರಣಿಸಿದ್ದರಿಂದ ಕಂಪಿಲ ರಾಯನ ರಾಜ್ಯ ಹಾಳಾಗಿ ಹೋಯಿತು. ಮುಂದೆ ಕ್ರಿ. ಶ. ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡ ಮೇಲೆ ಸಂಡೂರಿನ ಪ್ರದೇಶವೂ ಇವರ ಆಳ್ವಿಕೆಗೆ ಒಳಪಟ್ಟಿತು.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡ ಮೇಲೆ ಸಂಡೂರಿನ ಪ್ರದೇಶವೂ ಇವರ ಆಳ್ವಿಕೆಗೆ ಒಳಪಟ್ಟಿತು. ವಿಜಯನಗರ ಸಾಮ್ರಾಜ್ಯ ಪತನವಾದ ಮೇಲೆ ಬಳ್ಳಾರಿ ಜಿಲ್ಲೆಯ ಪ್ರದೇಶವೆಲ್ಲಾ ಪಾಳೆಯಗಾರರಲ್ಲಿ ಹಂಚಿಹೋಯಿತು. ಆಗ ಸಂಡೂರಿನ ಪ್ರದೇಶ ಜರಿಮಲೆಯ ಪಾಳೆಯಗಾರರಿಗೆ ಸೇರಿತು. ಶಿವಾಜಿಯ ಸೇನಾನಿ ಸಂತಾಜಿ ಘೋರ್ಪಡೆಯ ವಂಶಸ್ಥನಾದ ಸಿದ್ದೋಜಿರಾವ್ ಘೋರ್ಪಡೆ ಕ್ರಿ.ಶ. ೧೭೨೮ ರಲ್ಲಿ ಜರಮಲೆ ಪಾಳೆಯಗಾರನಿಂದ ಸಂಡೂರು ಪ್ರದೇಶವನ್ನು ವಶಪಡಿಸಿಕೊಂಡನು.

ಅಂದಿನಿಂದ ಘೋರ್ಪಡೆ ವಂಶದವರ ಆಳ್ವಿಕೆ ಇಲ್ಲಿ ಪ್ರಾರಂಭವಾಯಿತು. ಕ್ರಿ.ಶ. ೧೭೭೫ – ೭೬ ರಲ್ಲಿ ಸಂಡೂರು ಹೈದರಾಲಿಯ ಆಳ್ವಿಕೆ ಒಳಪಟ್ಟಿತ್ತಾದರು, ೧೭೯೨ ರಲ್ಲಿ ಟಿಪ್ಪು ಸುಲ್ತಾನನಿಗೂ ಮತ್ತು ಬ್ರಿಟಿಷರ ಈಸ್ಟ್ ಇಂಡಿಯಾ ಕಂಪನಿಗೂ ನಡೆದ ಒಪ್ಪಂದದಂತೆ ಸಂಡೂರಿನ ಅಧಿಕಾರ ಪುನಃ ಘೋರ್ಪಡೆಯವರಿಗೆ ಲಭ್ಯವಾಯಿತು. ಕ್ರಿ.ಶ. ೧೮೧೭ ರಲ್ಲಿ ಬೆಸಿಸ್ ಒಪ್ಪಂದದ ಪ್ರಕಾರ ಸಂಡೂರು ಬ್ರಿಟಿಷರ ವಶವಾಗಿದ್ದು, ಕ್ರಿ.ಶ. ೧೮೧೮ ರಲ್ಲಿ ಪುನಃ ಸಂಡೂರಿನ ಅಧಿಕಾರವನ್ನು ಘೋರ್ಪಡೆ ವಂಶದವರಿಗೆ ವಹಿಸಿಕೊಡಲಾಯಿತು. ೧೯೨೮ರಲ್ಲಿ ಯಶವಂತರಾವ್ ರವರು ಪಟ್ಟಕ್ಕೆ ಬಂದರು.

ಹಿಂದೂರಾವ್ ಘೋರ್ಪಡೆಯವರ ಸಂಡೂರು ಸಂಸ್ಥಾನದ ಕೊನೆಯ ಅರಸರು, ಆಧುನಿಕ ಶಿಕ್ಷಣವನ್ನು ಪಡೆದುಕೊಂಡಿದ್ದ ಶ್ರೀಯುತರು ತಮ್ಮ ಸಂಸ್ಥಾನದ ಶ್ರೇಯಸ್ಸಿಗೆ ಶ್ರಮಿಸಿ, ಹಲವಾರು ಸುಧಾರಣಾತ್ಮಕ ಕ್ರಮಗಳನ್ನು ಕೈಗೊಂಡರು. ಪ್ರಜೆಗಳಿಂದ ಆರಿಸಲ್ಪಟ್ಟ 'ಪ್ರಜಮಂಡಲಿ'ಯನ್ನು ಪ್ರಥಮವಾಗಿ ಪ್ರಾರಂಭಿಸಿದ ಶ್ರೇಯಸ್ಸು ಶ್ರೀ ಯಶವಂತರಾವ್ ಘೋರ್ಪಡೆಯವರಿಗೆ ಸಲ್ಲುತ್ತದೆ. ಮೇಲು – ಕೀಳು ಎನ್ನುವ ಎಲ್ಲ ಜಾತಿಯವರಿಗೆ ದೇವಾಲಯಗಳಿಗೆ ಪ್ರವೇಶ ಕಲ್ಪಿಸಿ ಶರಣ ತತ್ವವನ್ನು ಜಾರಿಗೆ ತಂದು ಮಹಾತ್ಮ ಗಾಂಧಿಯವರಿಂದ ಹೊಗಳಿಸಿಕೊಂಡ ಕೀರ್ತಿ ಇವರದಾಗಿದೆ. ಒಟ್ಟಾರೆ ಹಲವಾರು ಜನ ಕಲ್ಯಾಣ ಕಾರ್ಯಗಳನ್ನು ಕೈಗೊಂಡು ಜನಪ್ರಿಯ ಅರಸರಾಗಿ ಮೆರೆದರು. ಭಾರತವು ಸ್ವಾತಂತ್ರ್ಯ ಪಡೆದುಕೊಂಡಾಗ ಈ ಪುಟ್ಟ ಸಂಸ್ಥಾನವು ಭಾರತದಲ್ಲಿ ವಿಲೀನಗೊಂಡು ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ತಾಲೂಕಿನ ಮುಖ್ಯ ಸ್ಥಳವಾಗಿ ಪರಿವರ್ತಿತವಾಯಿತು.

ಈ ಸಂಡೂರಿನಲ್ಲಿ ಅನೇಕ ಜನರು ಯಶವಂತರಾವ್ ಘೋರ್ಪಡೆಯ ನಂತರ ಎಂ.ಎಲ್.ಎ.ಗಳಾಗಿ ಬಂದಂತವರು.

೦೧. ಡಾ॥ ನಾಗನ ಗೌಡ ೧೯೫೨ – ೫೭ (ಹೊಸಪೇಟೆ)

೦೨. ಶ್ರೀ ರಾಯನ ಗೌಡ ೧೯೫೮ – ೫೯ (ಬಳ್ಳಾರಿ)

೦೩. ಶ್ರೀ. ಎಂ.ವೈ. ಘೋರ್ಪಡೆ ೧೯೫೯ – ೭೪ (ಸಂಡೂರು)

೦೪. ಶ್ರೀ. ವಿರೂಜಿಲಾಡ್ ೧೯೭೪ – ೭೯ (ಸಂಡೂರು)

೦೫. ಶ್ರೀ. ಸಿ. ರುದ್ರಪ್ಪ ೧೯೭೯ – ೮೦

೦೬. ಶ್ರೀ. ಯು. ಭೂಪತಿ ೧೯೮೧ – ೮೫ (ತೊರಣಗಲ್ಲು)

೦೭. ಶ್ರೀ. ಎಂ.ವೈ. ಘೋರ್ಪಡೆ ೧೯೮೬ – ೨೦೦೪ (ಸಂಡೂರು)

೦೮. ಶ್ರೀ. ಸಂತೋಷ್ ಲಾಡ್ ೨೦೦೪ – ೨೦೦೯ (ಸಂಡೂರು)

೦೯. ಶ್ರೀ. ಈ. ತುಕರಾಮ್ ೨೦೦೯ – (ಯಶವಂತನಗರ)

**೩.ವಾಸ್ತು ಶಿಲ್ಪ:-**

ಕ್ರಿಪೂ. ೩ನೇಯ ಶತಮಾನದ ಮೌರ್ಯರಿಂದ ಹಿಡಿದು ಮೈಸೂರಿನ ಒಡೆಯವರೆಗಿನ ಸುಧೀರ್ಘವಾದ ಕರ್ನಾಟಕ ಚರಿತ್ರೆಯಲ್ಲಿ ಶಿಲ್ಪಕಲೆಯ ಉಗಮ ವಿಕಾಸದ ಹೆಜ್ಜೆಗಳನ್ನು ಕಾಣಬಹುದು. ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ ಮತ್ತು ವಿಜಯನಗರದಂತಹ ಪ್ರಸಿದ್ದ ರಾಜ ಮನೆತನಗಳ ಜೊತೆ ಸಂಡೂರು ಸಂಸ್ಥಾನದಾದ್ಯಂತ ಸುಭದ್ರವಾದ ಸಾಮ್ರಾಜ್ಯವನ್ನು ಕಟ್ಟಿದ್ದಲ್ಲದೇ ಅನೇಕ ದೇವಾಲಯ, ಮಠ, ಬಸದಿಗಳನ್ನು ನಿರ್ಮಿಸಿ ಅವುಗಳಿಗೆ ಉದಾರವಾದ ದಾನದತ್ತಿಗಳನ್ನು ನೀಡಿ ಪ್ರೋತ್ಸಾಹಿಸಿದರು. ಜನಸಾಮಾನ್ಯರು ಕೂಡ ಇವುಗಳನ್ನು ಕಟ್ಟುವುದು ಒಂದು ಪುಣ್ಯ ಕಾರ್ಯವೆಂದು ಭಾವಿಸಿದ್ದರಿಂದ ವಾಸ್ತುಶಿಲ್ಪಕಲೆ ಇಲ್ಲಿ ಹೇರಳವಾಗಿ ಬೆಳೆದು ಬರಲು ಕಾರಣವಾಯಿತು.

ಇತಿಹಾಸ ಕಾಲದಲ್ಲಿ ಕ್ರಿಪೂ. ೩ನೇ ಶತಮಾನದಲ್ಲಿ ಉತ್ತರ ಭಾರತದಲ್ಲಿ ಅಧಿಕಾರ ಹೊಂದಿದ್ದ ಮೌರ್ಯರು ದಕ್ಷಣ ಭಾರತದ ಕೆಲವು ಪ್ರದೇಶಗಳ ಮೇಲೆ ತಮ್ಮ

ಅಧಿಪತ್ಯ ಸ್ಥಾಪಿಸಿದರೆಂಬುದು ಶಾಸನಗಳಿಂದ ತಿಳಿಯುವುದಾದರೂ, ಈ ಸಂಡೂರು ತಾಲೂಕಿನಲ್ಲಿ ಅವರ ಯಾವ ಕಟ್ಟಡಾವಶೇಷಗಳು ಕಂಡು ಬರುವುದಿಲ್ಲ.

ಬದಾಮಿ ಚಾಲೂಕ್ಯರ ಕಾಲದಲ್ಲಿ ಕರ್ನಾಟಕ ದೇವಾಲಯಗಳ ಹಲವು ಬಗೆಯ ಪ್ರಯೋಗಗಳು ನೆಡೆದವು ಅಲ್ಲದೆ ಮುಂದಿನ ವಾಸ್ತು ಶೈಲಿಗೆ ಇವರು ಒಂದು ಮಾದರಿಯನ್ನು ಹಾಕಿಕೊಟ್ಟರು. ಇವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳ ಲಕ್ಷಣಗಳಲ್ಲಿ ಚೌಕಾಕಾರದ ಗರ್ಭಗೃಹ ಮತ್ತು ಚಿಕ್ಕ ಮುಖ ಮಂಟಪ ಅದಕ್ಕೆ ಪ್ರದಕ್ಷಿಣಾಪಥವನ್ನೊಳಗೊಂಡಿರುವಂತವು. ಗಜ ಪುಷ್ಠಾಕರ ತ್ರಿಕೂಟಾಚಲದ ತಲವಿನ್ಯಾಸದಲ್ಲಿರುವ ಇನ್ನೊಂದು ಪ್ರಕಾರವು ಸಂಡೂರಿನ ಕುಮಾರಸ್ವಾಮಿಯ ಬೆಟ್ಟದ ಪಾರ್ವತಿ ದೇವಾಲಯವು ಇವರ ಕಾಲದ ಕುರುಹು ಆಗಿದೆ ಎಂದು ತಿಳಿದು ಬರುವುದು, ರಾಷ್ಟ್ರಕೂಟರ ನಿರ್ಮಿತಿಗೆ ಒಳಪಡುವ ಈ ಪಾರ್ವತಿ ದೇವಾಲಯವು ತಾಲೂಕಿನ ಅತ್ಯಂತ ಪ್ರಾಚೀನ ವಾಸ್ತು ಶಿಲ್ಪವಾಗಿದೆ. ಕಾರ್ತಿಕೇಯನ ಕ್ಷೇತ್ರವೆಂದು ಇಂದಿಗೂ ಪ್ರಸಿದ್ದವಾಗಿರುವ ಈ ಪರಿಸರದಲ್ಲಿ ಈ ದೇಗುಲವು ವಿಶಾಲವಾದ ಗರ್ಭ ಗೃಹ, ಸಭಾಮಂಟಪಗಳನ್ನು ಹೊಂದಿದೆ. ಈ ದೇಗುಲವು ವಿಶಾಲವಾದ ಗರ್ಭ ಗೃಹದಲ್ಲಿ ರಾಷ್ಟ್ರಾಕೂಟ ಶೈಲಿಯ ಆರು ಕಂಬಗಳು ಇವುಗಳ ಮಧ್ಯೆ ಪೀಠದ ಮೇಲೆ ಪಾರ್ವತಿ ಶಿಲ್ಪವಿದೆ. ಇದು ಸುಮಾರು ೪.೫ ಅಡಿ ಎತ್ತರವಾಗಿದ್ದು, ಸಮಭಂಗಿಯಲ್ಲಿದೆ. ಇದರ ಕೈಗಳಲ್ಲಿ ಶಿವ, ಗಣೇಶ ಮತ್ತು ಫಲಗಳಿವೆ. ಇತ್ತೀಚಿಗೆ ಕಂಚಿನಿಂದ ನಿರ್ಮಿಸಿದ ಪ್ರಭಾವತಿಯನ್ನು ಈ ಶಿಲ್ಪಕ್ಕೆ ಜೋಡಿಸಲಾಗಿದೆ. ದ್ವಾರಬಾಗಿಲವಾದದಲ್ಲಿ ಹೂ ಬಳ್ಳಿಗಳು ಲಲಾಟ ಬಿಂಬದಲ್ಲಿ ಗರುಡನನ್ನು ಕೆತ್ತಲಾಗಿದೆ. ಸಭಾಮಂಟಪದ ಪಾರ್ಶ್ವಗಳಲ್ಲಿರುವ ದೇವಕೋಷ್ಠಕಗಳಲ್ಲಿ ಕೇಶವ, ಸೂರ್ಯ, ಮಾಧವ, ಯಮಧರ್ಮನ ಶಾಸನ ಶಿಲ್ಪಗಳಿವೆ.

ಕುಮಾರಸ್ವಾಮಿ ದೇವಾಲಯವೂ ಪುರ್ವಾಭಿಮುಖವಾಗಿರುವ ಈ ದೇಗುಲವು ಗರ್ಭಗೃಹ ಮತ್ತು ಸಭಾಮಂಟಪವನ್ನು ಹೊದಿದೆ. ಗರ್ಭ ಗೃಹದಲ್ಲಿ ಆ ಕಂಬಗಳಿವೆ. ಆ ಕಂಬಗಳಲ್ಲಿರು ಚೌಕಾಕಾರ ಹಾಗೂ ವರ್ತುಲಾಕಾರದ ಭಾಗಗಳಿವೆ.

ಗರ್ಭಗೃಹದ ದ್ವಾರದ ಚೌಕಟ್ಟು ಹೆಚ್ಚು ಆಲಂಕಾರ ಇರುವುದಿಲ್ಲ. ದ್ವಾರವು ಮಯೂರ, ಗಜ, ಗಿಳಿಗಳ ಕೆತ್ತನೆ ಶಿಲ್ಪಗಳಿಂದ ಕೂಡಿದೆ. ಗರ್ಭಗೃಹದಲ್ಲಿರುವ ಸುಮಾರು ನಾಲ್ಕೂವರೆ ಅಡಿ ಎತ್ತರವಾದ ಕುಮಾರಸ್ವಾಮಿಯು ಸಮಭಂಗಿಯಲ್ಲಿದೆ. ಸುತ್ತಲೂ ಪ್ರಭಾವಳಿ ಹಾಗೂ ಕಿರೀಟ ಮುಕುಟವನ್ನು ಹೊಂದಿದೆ. ಈತನ ಒಂದು ಕೈಯಲ್ಲಿ ದಂಡಾಯುಧ, ಇನ್ನೊಂದು ಕೈಯಲ್ಲಿ ಅಭಯ, ಕೈ ಮೇಲೆ ಕ್ರೌಂಚ ಪಕ್ಷಿ ನಿಂತಿದೆ. ಇದರ ಕೆಳಗೆ ರಾಮ – ಲಕ್ಷ್ಮಣರು, ಬಲಬದಿ ಕೆಳಗೆ ಮಯೂರ ಶಿಲ್ಪಗಳನ್ನು ಕೆತ್ತಲಾಗಿದೆ. ಸ್ತ್ರೀಯರಿಗೆ ಕುಮಾರ ಸ್ವಾಮಿಯ ದರ್ಶನ ಅಲಭ್ಯವೆಂದು ಬಹುದಿನಗಳ ನಂಬಿಕೆ ಇತ್ತು. ಅದಕ್ಕೆ ಪೌರಾಣಿಕ ಕಾರಣಗಳನ್ನು ಕೊಡಲಾಗುತ್ತಿತ್ತು. ಆದರೆ ಈಗ ಎಲ್ಲಾ ಸ್ತ್ರೀಯರು ಮುಕ್ತವಾಗಿ ನೋಡಲು ಅನುವುಮಾಡಿಕೊಡಲಾಗಿದೆ. ದೇವಾಲಯದ ಹೊರ ಬಿತ್ತಿಯ ಅಧಿಷ್ಠಾನದಲ್ಲಿ ಕುಮುದ ಹಾಗೂ ಚೌಕಗಳುಳ್ಳ ಪಟ್ಟಿಕಾ ಭಾಗಗಳು, ಗೋಡೆಯಲ್ಲಿಯ ಎತ್ತರವಾದ ಅರ್ಧಗಂಬಗಳು ದೇವಾಲಯದ ಅಂದವನ್ನು ಹೆಚ್ಚಿಸಿದೆ. ಗರ್ಭಗುಡಿಯ ಮೇಲಿನ ದ್ರಾವಿಡ ಶೈಲಿಯ ಕೂಟ ಶಿಖರದಲ್ಲಿಯ ಹಿತ್ತಾಳೆಯ ಕಳಸವು ಕೆಂಪು ಉಸುಕಿನ ಶಿಲೆಯ ಕಟ್ಟಡಕ್ಕೆ ಸಮ್ಮಿಳಿತಗೊಂಡಿವೆ. ಈ ದೇವಾಲಯದಲ್ಲಿ ರಾಷ್ಟ್ರಕೂಟ, ಹೊಯ್ಸಳ ಹಾಗೂ ವಿಜಯನಗರದ ಅರಸರ ಶಾಸನಗಳಿವೆ. ಒಂದು ಶಾಸನದಲ್ಲಿ ಕ್ರಿ.ಶ. ೧೮೫೪ ರಲ್ಲಿ ಸಕ್ರಪ್ಪ ಮತ್ತು ಕುಮಾರಪ್ಪ ಎಂಬುವರು ಎಂಬತ್ತೊಂದು ಸೇರು ತೂಕದ ಜಾಗಟೆ ಮಾಡಿಸಿದ ಉಲ್ಲೇಖವಿದೆ. ಕುಮಾರಸ್ವಾಮಿ ಹಾಗೂ ಪಾರ್ವತಿ ದೇವಾಲಯಗಳು ಇಲ್ಲಿ ಪ್ರಮುಖವಾಗಿದ್ದು, ಜೊತೆಗೆ ಈಶ್ವರ, ನಾಗನಾಥೇಶ್ವರ, ರಂಗನಾಥ, ಪಾತಾಳೇಶ್ವರ ಹಾಗೂ ಮಾರ್ಗದ ಮಧ್ಯದಲ್ಲಿ ಹರಿಶಂಕರ ದೇವಲಾಯಗಳಿವೆ. ಹರಿಶಂಕರ ದೇವಾಲಯವು ಕಲ್ಯಾಣ ಚಾಳುಕ್ಯರ ಅವಧಿಯದ್ದಾಗಿದೆ. ಇದರ ಮುಂದಿರುವ ಜಲಪಾತದಲ್ಲಿ ವರ್ಷವಿಡಿ ನೀರು ಪರ್ವತದ ಬಂಡೆಗಳ ಸಂದುಗಳಿಂದ ಇಳಿದು ಬರುತ್ತದೆ. ಪ್ರವಾಸಿಗಳಿಗೆ ಇದೊಂದು ತಣ್ಣನೆಯ ತಂಗುದಾಣವಾಗಿದೆ. ಶಂಕರನ ತಪಸ್ಸು ಭಂಗ ಮಾಡಿದಾಗ ತನ್ನ ಮೂರನೆಯ ಕಣ್ಣಿನಿಂದ ಮನ್ಮಥನನ್ನೂ ಭಸ್ಮ ಮಾಡುತ್ತಾನೆ. ಶ್ರೀ ಹರಿಯು ಶಂಕರನ ದರ್ಶನ ಮಾಡಿ ತನ್ನ ಪುತ್ರನನ್ನು ಪುನಃ ದಯಪಾಕಿಸಬೇಕೆಂದು ಪ್ರಾರ್ಥಿಸುತ್ತಾನೆ. ಆಗ ಶಂಕರ ಶ್ರೀಹರಿಗೆ ಲೋಹಾಚಲದಲ್ಲಿ ಹರಿಯು ತಪಸ್ಸು ಕೈಗೊಳ್ಳು ನಿನ್ನ

ಇಷ್ಟಾರ್ಥ ಸಿದ್ಧಿಯಾಗುತ್ತದೆ ಎಂದು ಹೇಳಿದನು. ಆಗ ಶ್ರೀ ಹರಿಯು ಲೋಹಾಚಲಕ್ಕೆ ಬಂದು ತನ್ನ ಗದೆಯಿಂದ ಹೊಡೆದು ತೀರ್ಥವನ್ನು ನಿರ್ಮಾಣಮಾಡಿ ಅದರಲ್ಲಿ ತ್ರಿಕಾಲ ಸ್ನಾನಮಾಡಿ ಈಶ್ವರನನ್ನು ಪ್ರಾರ್ಥಿಸುತ್ತಾನೆ. ಈಗಾಗಿ ಬೆಟ್ಟದ ಮೇಲಿನಿಂದ ಸದಾಕಾಲ ಈ ತೀರ್ಥಕ್ಕೆ ನೀರು ಹರಿದು ಬರುತ್ತದೆ ಎಂಬ ನಂಬಿಕೆ ಇದೆ. ಇಲ್ಲಿಯ ದೇವಾಲಯವು ಗರ್ಭಗೃಹ, ಸಭಾಮಂಟಪಗಳಿಂದ ಕೂಡಿದ್ದು ಮರಳು ಮಿಶ್ರಿತ ಕೆಂಪು ಶಿಲೆಯಿಂದ ರೂಪಗೊಂಡಿದೆ.

**೪.ಸಾಹಿತ್ಯ:-**

ಸಂಡೂರು ಚಾರಿತ್ರಿಕವಾಗಿ ಊಹಿಸಿಕೊಂಡಿರುವಂತೆ ಸಾಹಿತ್ಯದಲ್ಲಿಯೂ ಕೂಡ ತನ್ನದೇ ಆದ ಮೌಲ್ಯವನ್ನು ಉಳಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ದಿವಂಗತ ವಿಧ್ವಾನ್ ಪಂಡಿತರು ೨೫. ೦೨. ೧೯೦೩ ರಲ್ಲಿ ವೆಂಕಪ್ಪ ಮತ್ತು ಭೈನವ್ವ ದಂಪತಿಗಳ ಮಗನಾಗಿ ಹುಟ್ಟಿದ ರಾಮಕವಿ ಎಂಬ ಕಾವ್ಯಾ ನಾಮದಿಂದ ಪ್ರಸಿದ್ದರು ಇವರು ಮೂಲತಃ ಸಂಡೂರಿನವರೇ ಆಗಿದ್ದು, ಸಾರ್ಥ ಭ್ರಾಹ್ಮಣನವರ ಗುಂಪಿಗೆ ಸೇರಿದ್ದು ಉತ್ತಮ ಶಿಕ್ಷಕರಾಗಿ ಸೇವೆ ಸಲ್ಲಿಸಿದವರು. ಆಧ್ಯಾತ್ಮಕ ವಿಚಾರಗಳನ್ನು ಬದುಕಿನಲ್ಲಿ ಆಳವಡಿಸಿಕೊಂಡು ಆದರ್ಶ ದೈವ ಭಕ್ತರಾಗಿದ್ದರು. ಇವರು ಸಾಹಿತ್ಯಿಕವಾಗಿ ಅಪಾರ ಕೃಷಿ ಗೈದಿದ್ದಾರೆ. ಕೊಟ್ಟೂರೇಶ್ವರ ಶತಕ, ಷಣ್ಮುಖಯಾತ್ರೆ, ಸತ್ಯನಾರಾಯಣ, ವೇಣುಗೋಪಾಲ ಶತಕ, ಹುಲಿಕುಂಟೇಶ್ವರ ಶತಕ, ಶನೇಶ್ವರ ಶತಕ, ಶ್ರೀದೇವಿ ಪುರಾಣ ಮುಂತಾದ ಕಾವ್ಯ ಕೃತಿಗಳನ್ನು ರಚಿಸಿದ್ದಾರೆ. ಜಿ.ಹೆಚ್. ಸಂಭಾಪೂರ್ ಇವರು ಸಾಹಿತ್ಯ ಕೃಷಿ ಹಾಗೂ ಸಾಹಿತ್ಯ ಚಟುವಟಿಕೆಯಲ್ಲಿ ಅಪಾರ ಸೇವೆ ಸಲ್ಲಿಸಿದ್ದಾರೆ. ಇವರ ಪ್ರಕಟಿತ ಕೃತಿಗಳೆಂದರೆ ಸ್ಕಂದ ಪುರಾಣ, ಶ್ರೀಸುಬ್ರಹ್ಮಣ್ಯ ಸ್ತೋತ್ರ, ಶ್ರೀಕಾರ್ತಿಕೇಯ, ಸುಪ್ರಭಾತ ಸ್ತೋತ್ರ, ಶ್ರೀಸ್ಕಂದ ಕೀರ್ತನೆಗಳು ಗರುಡ ಪುರಾಣ ಮತ್ತು ಮರಾಠಿ ಗ್ರಂಥದ ಕನ್ನಡ ಅನುವಾದ ಕೃತಿಯಾದ ಕನ್ನಡ ಶಾಳಿ ಗ್ರಾಮ ಗಾಥಾರನಿಂದ ಎಂಬ ಕೃತಿಗಳಲ್ಲದೇ ದೂರ್ವಾಸಾತಿಥ್ಯ ಎಂಬ ರೇಡಿಯೋ ನಾಟಕವೂ ಪ್ರಕಟವಾಗಿದೆ.

ಬಳಕೂರು ಸುಬ್ಬಯ್ಯ ಅಡಿಗರು ಸಹ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಸೇವೆಯನ್ನು ಮಾಡಿದ್ದಾರೆ. ಇವರ ಕಾವ್ಯ ನಾಮಗಳು ಸವ್ಯಸಾಚಿ ಮತ್ತು ಲಲಿತಾಗ್ರಜ ಇವರು ನಾಡಿನ ವಿವಿಧ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದಿರುವುದು ಇವರ ಲೇಖನಗಳ ವೈವಿಧ್ಯತೆಗೆ ಹಾಗೂ ಇವರ ಪ್ರತಿಭಾ ಸಂಪನ್ನತ್ತಿಗೆ ಸಾಕ್ಷಿಯಾಗಿದೆ. ಇವರು ಪ್ರಕಟಿಸಿದ ಪ್ರಮುಖ ಕೃತಿಗಳು ಜೀವನ ಕಲೆ, ಜೀವನ ದರ್ಶನ, ಮಧುರ ನೀತಿಕಥೆಗಳು, ಕಣ್ಣರಿತ ಭಾವ, ಆಭರಣಗಳ ಪೆಟ್ಟಿಗೆ, ಇತ್ಯಾದಿ.

ಶ್ರೀ. ಎಂ.ವೈ:. ಘೋರ್ಪಡೆಯರು ಸಹ ರಾಜ್ಯ – ರಾಷ್ಟ್ರ – ಅಚಿತರಾಷ್ಟ್ರೀಯ ಮಟ್ಟದಲ್ಲಿ ವಿವಿದ ಕ್ಷೇತ್ರಗಳಲ್ಲಿ ತಮ್ಮ ಸಾಧನೆಯ ಮೂಲಕ ಸಂಡೂರಿನ ಕೀರ್ತಿಯನ್ನು ಪಸರಿಸಿದ್ದಾರೆ. ಇವರೊಬ್ಬ ಶ್ರೇಷ್ಠ ಅರ್ಥಶಾಸ್ತ್ರಜ್ಞ, ಉದ್ದಿಮೆದಾರ, ಛಾಯಗ್ರಹಕ, ಶಿಕ್ಷಣ ಪೋಷಕ, ಕುಶಲತೆಗಳ ಪೋಷಕ, ಸಮಾಜ ಸೇವಕ, ಗ್ರಾಮಭಿವೃದ್ದಿಯ ಕನಸುಗಾರ ಹಾಗೆಯೇ, ಚಿಂತನ ಶೀಲ ಬರಹಗಾರರೂ ಆಗಿದ್ದಾರೆ. ಇವರು ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಗಳಲ್ಲೂ, ಕೃತಿಗಳನ್ನು ರಚಿಸಿದ್ದಾರೆ. ಕನ್ನಡ ಕೃತಿಗಳು – ಎಚ್ಚರದ ಚೇತನ (೧೯೮೧), ಇಂದಿರಾಗಾಂಧಿ, ನಾನುಕಂಡಂತೆ (೧೯೮೪), ಇಂಗ್ಲೀಷ್ ಕೃತಿಗಳು Sunlight and Shadows (೧೯೮೩),Development Ethics and Experience(೧೯೯೧).

ಶ್ರೀ.ವಿ.ಟಿ. ಕಾಳೆಯವರು (೧೯೩೪) ನಾಡಿನ ಖ್ಯಾತ ಚಿತ್ರ ಕಲಾವಿದರೂ, ಸಾಹಿತಿಗಳು ಆದ ಇವರು ಸಂಡೂರಿನ ಕಲಾರತ್ನವೆನಿಸಿದ್ದಾರೆ. ಇವರ ಸಾಹಿತ್ಯಿಕ ಸಾಧನೆಯನ್ನು ಗಮನಿಸಿದಾಗ ನಾಟಕಕಾರರಾಗಿ ಹೆಚ್ಚು ಗಮನ ಸೆಳೆಯುತ್ತಾರೆ. ಅವುಗಳಲ್ಲಿ ಚಿಕ್ಕಮ್ಮ (೧೯೫೯), ಪ್ರೌಡದೇವರಾಯ, ವೈಭವಂ, ಗಾಳಿಗೋಪುರ, ಭಕ್ತಾಮೀರಾ, ಭಕ್ತಪುರಂದರದಾಸ, ಕರ್ನಾಟಕ ನಂದಾದೀಪ, ಪಲ್ಲವಿ ಮತ್ತು ದಶಾವತಾರ ಗೀತರೂಪಕಗಳಾಗಿವೆ. ಐತಿಹಾಸಿಕ ನಾಟಕಗಳಾದ ಬುದ್ಧಂಶರಣಂ ಗಚ್ಚಾಮಿ, ವಿಜಯನಗರ ಸಾಮ್ರಾಜ್ಯ, ಸಂತ ಕಬೀರದಾಸ ಪ್ರಮುಖವಾಗಿವೆ. ಸಾಮಾಜಿಕ ನಾಟಕಗಳಲ್ಲಿ ಹೆಣ್ಣಿಗೊಂದು ನೆಲೆ, ತಾಳಿಗೊಂದು ಬೆಲೆ ಪ್ರಮುಖವಾಗಿದೆ.

ಶ್ರೀ. ವೇದವ್ಯಾಸ ಜೋಷಿ ಸಾಹಿತ್ಯಕ್ಕೆ ಅತ್ಯಮುಲ್ಯ ಕೊಡುಗೆಯನ್ನು ನೀಡಿದ್ದಾರೆ. ಕಪಿಹೃದಯದ ಜೋಷಿಯವರು ಔತಣ (೧೯೭೦), ಅರಳು (೧೯೮೦), ಆಹ್ವಾನ (೧೯೮೧) ಪ್ರಣಯ ಜೀವರಾಗ (೧೯೮೩) ಮುಂತಾದ ಕೃತಿಗಳನ್ನು ಬರೆದಿದ್ದಾರೆ. ಡಾ॥ ಆರ್ಕಸಾಲಿ ವೃಷಭೇಂದ್ರಾಚಾರ್ – ಕಾವ್ಯನಂದರ ಕಾವ್ಯಸಮೀಕ್ಷೆ ಮಹಾಮಾನವತಾವಾದಿ ತಿಂಥಿಣಿ ಮೌನೇಶ್ವರ, ತೆಲುಗಿನ ದಿಗಂಬರ ಕಾವ್ಯ ಸಮೀಕ್ಷೆ ಎಂಬ ಅಮುಲ್ಯ ಕೃತಿಗಳನ್ನು ರಚಿಸಿ ತಮ್ಮ ಭಾಷಾ ಪ್ರೌಡತೆಯನ್ನು ಮೆರೆದಿದ್ದಾರೆ. ಡಾ॥ ಮಲ್ಲಿಕಾಘಂಟಿ ಸ್ತ್ರೀವಾದ ಪ್ರತಿಪಾದಕರಾಗಿ ದಲಿತ ಬಂಡಾಯ ಚಳುವಳಿಯಿಂದ ಬೆಳೆದು ಬಂದವರಾಗಿದ್ದಾರೆ. ನಾಡಿನ ಶ್ರೇಷ್ಠ ವಿರ್ಮಶಕರಾಗಿ ಗಮನ ಸೆಳೆದಿದ್ದಾರೆ. ಇವರ ಕೃತಿಗಳು – ತುಳಿಯದಿರಿ ನನ್ನ, ರೊಟ್ಟಿ ಮತ್ತು ಹುಡುಗಿ, ಈ ಹೆಣ್ಣುಗಳೇ ಹೀಗೆ ಹಾಗೂ ತನು ಕರಗದವರಲ್ಲಿ ಎಂಬ ವೈಚಾರಿಕ ಕೃತಿಗೆ ವಿಶ್ವೇಶ್ವರಯ್ಯ ಪ್ರಶಸ್ತಿ ಬಂದಿದೆ.

**೫.ಶಿಕ್ಷಣ:–**

ಸಂಡೂರು ಇಷ್ಟೆಲ್ಲಾ ವ್ಯಾವಹಾರವನ್ನು ಹಾಗೂ ಗಣಿಗಳಲ್ಲಿ ಅತ್ಯಾದುನಿಕ ಯಂತ್ರಗಳನ್ನು ಚಲಾಯಿಸುವುದಕ್ಕೆ, ಕೆಲಸಕ್ಕೆ ತಕ್ಕಂತೆ ಶಿಕ್ಷಣ ಪಡೆಯುವುದು ಅವಶ್ಯಕ ಆದ್ದರಿಂದಲೇ ಇಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳು ರೂಪಗೊಂಡಿವೆ. ಮತ್ತು ಪದವಿ ಶಿಕ್ಷಣ ಕಾಲೇಜು, ತ್ರಾಂತ್ರಿಕ ಶಿಕ್ಷಣ, ಶಾಲಾ ವಿದ್ಯಾ ಸಂಸ್ಥೆಗಳು ಸರಾಗವಾಗಿ ನಡೆಯುತ್ತಿವೆ. ಮತ್ತು ಸಂಡೂರಿನ ನಂದಿಹಳ್ಳಿಯಲ್ಲಿ ಸ್ನಾತಕೋತ್ತರ ಪದವಿ ವಿದ್ಯಾಲಯವಿದೆ. ಸಂಡೂರು ಹತ್ತಿರ ಯಶವಂತನಗರದಲ್ಲಿ ಡಿಪ್ಲಮೋ ಸಂಸ್ಥೆಯೂ ಇದೆ. ಇದರಿಂದ ಹೊರ ರಾಜ್ಯ ಮತ್ತು ಜಿಲ್ಲೆಗಳಿಂದ ವಿದ್ಯಾರ್ಥಿಗಳು ಹೆಚ್ಚಿನ ಶಕ್ಷಿಣವನ್ನು ಪಡೆಯಲು ಬರುತ್ತಾರೆ.

## ೬ ಸಮುದಾಯಗಳು

ಜಾನಪದ ಕೇವಲ ವೃತ್ತಿ ಅಥವಾ ಭೌಗೋಳಿಕ ಪರಿಸ್ಥಿತಿಯನ್ನು ಅನುಸರಿಸಿಯಷ್ಟೇ ಬೆಳೆಯುವುದಿಲ್ಲಾ. ಮತ್ತು ವೈವಿಧ್ಯಗೊಳ್ಳುವುದಿಲ್ಲಾ. ಅದರ ನಡುವೆ ವಿವಿಧ ಸಮುದಾಯಗಳ ಸಂಬಂಧವು ಮುಖ್ಯವಾಗಿರುತ್ತದೆ. ಕಾರಣ ಇವೆಲ್ಲಾ ಪರಸ್ಪರ ಅಂತರ್ ಸಂಬಂಧಗಳು ಭಾರತೀಯ ಸಂದರ್ಭದಲ್ಲಿಯಂತೂ ಸಮುದಾಯ ಬಲಿಷ್ಠವಾದ ಒಂದು ಸಾಮಾಜಿಕ ಗುಣವಾಗಿದ್ದು ಸಾಂಸ್ಕೃತಿಕವಾಗಿ ಹಲವು ಅಂಶಗಳನ್ನು ನಿಯಂತ್ರಿಸುವ ನಿರ್ಮಿಸುವ ವಿಶೇಷತೆಯನ್ನು ಸಮುದಾಯ ಹೊಂದಿರುತ್ತದೆ. ಇಷ್ಟಲ್ಲದೆ ಸಮುದಾಯದ ಬಗೆಗೆ ಆಯಾ ಸಮುದಾಯಗಳಲ್ಲಿರುವ ನಂಬಿಕೆ ಐತಿಹ್ಯ ಪುರಾಣಗಳು ಜಾನಪದ ಅಧ್ಯಯನಕ್ಕೆ ಮುಖ್ಯ ಅಂಗವೇ ಆಗಿರುತ್ತವೆ. ಸಂಡೂರು ಗ್ರಾಮದಲ್ಲಿ ಎಲ್ಲಾ ಸಮುದಾಯದ ಜನರು ವಾಸವಾಗಿದ್ದಾರೆ. ಪರಿಶಿಷ್ಟ ಜನರು (ಎಸ್.ಸಿ) ಪರಿಶಿಷ್ಠ ಪಂಗಡದವರು (ಎಸ್.ಟಿ) ನಾಯಕರು, ಕುರುಬರು, ಅಕ್ಕ ಸಾಲಿಗರು, ವೀರಶೈವರು, ಕಮ್ಮಾರರು, ಬಡಿಗೇರು, ನೇಕಾರರು, ಮಡಿವಾಳರು, ಬಾರೀಕರು, ಶಾನಭೋಗರು, ಗೌಡರು, ಗಾಣಿಗರು, ಹಡಪದರೂ, ಚಲವಾದಿಗಳೂ, ಜಂಗಮರು, ದಾಸರು, ಕ್ರಿಶ್ಚಿಯನ್, ಮರಾಠರು, ಶೇಠರು, ಕೊರವರು, ಮುಸಲ್ಮಾನರು, ಬ್ರಾಹ್ಮಣರು ಮುಂತಾದ ಜನರಿದ್ದಾರೆ. ಊರಿನ ಹಬ್ಬ ಜಾತ್ರೆಗಳಲ್ಲಿ ಭಾಗವಹಿಸುತ್ತಾರೆ. ಎಲ್ಲಾ ಸಮುದಾಯದವರು ಶ್ರೀ ಗಂಡಿ ಲಕ್ಷ್ಮೀ ನರಸಿಂಹಸ್ವಾಮಿಯ ಜಾತ್ರೆ ಉತ್ಸವದಲ್ಲಿ ಭಾಗವಹಿಸುತ್ತಾರೆ. ಇದರಿಂದ ಸಹೋದರ ಭಾವನೆಯಿಂದ ಬೆರತು ಸೌಹಾರ್ದತೆಯನ್ನು ಮೆರೆಯುತ್ತಾರೆ. ಒಂದಾಗಿ ಬಾಳುತ್ತಾರೆ.

### ೭.ವೃತ್ತಿ:-

ಬಳ್ಳಾರಿ ಜಿಲ್ಲೆಯ ಅಭಿವೃದ್ದಿಯ ಅಡಿಪಾಯವೆಂದೂ, ಪರಿಗಣಿಸ್ಪಡುವ ಪೂರ್ವಭಾಗದ ತಾಲೂಕುಗಳಲ್ಲಿ ಒಂದಾದ ಸಂಡೂರು ತಾಲೂಕು ವೈಶಿಷ್ಟತೆಯಿಂದ ಕೂಡಿದ್ದು, ಸಮುದ್ದ ಮಟ್ಟದಿಂದ ಸುಮಾರು ೩೦೦೦ ಅಡಿಗಳಷ್ಟು ಎತ್ತರವಾದ ಬೆಟ್ಟ -

ಗುಡ್ಡಗಳನ್ನು ಹೊಂದಿದೆ. ಇಲ್ಲಿ ದೊರೆಯುವ ಹೇರಳವಾದ ಖನಿಜ ಸಂಪತ್ತು ದಟ್ಟವಾದ ಅರಣ್ಯ ಸಂಪತ್ತು, ಹತ್ತಾರು ಕೆರೆಗಳು ಹಾಗೂ ನಾರೀಹಳ್ಳ ಜಲಾಶಯಗಳಂತಹ ಅಪಾರವಾದ ನೈಸರ್ಗಿಕ ಸಂಪನ್ಮೂಲಗಳಿಂದಾಗಿ ಸಂಡೂರು ತಾಲೂಕು ದಕ್ಷಿಣದ ಕಾಶಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಸಂಡೂರಿನ ಎಲ್ಲಾ ಸಮುದಾಯಗಳು ಕೃಷಿಗಿಂತ ಹೆಚ್ಚಾಗಿ ಗಣಿಗಾರಿಕೆಯಲ್ಲಿ ತೊಡಗಿರುತ್ತಾರೆ ಮನೆಗೆ ಒಬ್ಬ ಲಾರಿ ಚಾಲಕ, ಲಾರಿಸಹಾಯಕ, ಮಿಷನ್ ಚಾಲಕ ಮುಂತಾದ ವೃತಿಯಲ್ಲಿ ತೊಡಗಿರುತ್ತಾರೆ. ಸಂಡೂರಿನ ಸುತ್ತ – ಮುತ್ತಲಿನ ವ್ಯಾಪ್ತಿಯಲ್ಲಿ ಕಂಡು ಬರುವ ಬೆಟ್ಟ – ಗುಡ್ಡಗಳಲ್ಲಿ ಅಪಾರವಾದ ಖನಿಜ ಸಂಪನ್ಮೂಲಗಳ ನಿಕ್ಷೇಪಗಳಿದ್ದು, ಅವುಗಳು ಗುಣಮಟ್ಟದಲ್ಲಿ ವಿಶ್ವಖ್ಯಾತಿಯನ್ನು ಪಡೆದಿವೆ. ಬಳ್ಳಾರಿ ಜಿಲ್ಲೆಯ ಒಟ್ಟು ಖನಿಜ ಸಂಪನ್ಮೂಲದಲ್ಲಿನ ಶೇಕಡ ೭೩ ಕ್ಕಿಂತಲೂ ಹೆಚ್ಚು ಪ್ರಮಣದ ಖನಿಜ ನಿಕ್ಷೇಪಗಳು ಸಂಡೂರಿನಲ್ಲಿವೆ. ಎಂದು ಅಂದಾಜಿಸಲಾಗಿದೆ. ತಾಲೂಕಿನ ವ್ಯಾಪ್ತಿಯಲ್ಲಿ ದೊರೆಯುವ ಕಚ್ಚಾ ಖನಿಜ ಅದಿರನ್ನು ಇಂಗ್ಲೆಂಡ್, ರಷ್ಯಾ, ಅಮೇರಿಕಾ, ಚೀನಾ, ಕೆನಡಾ ಮತ್ತು ಸ್ವಿಜ್ಜರ್‌ಲ್ಯಾಂಡ್ ಮುಂತಾದ ವಿದೇಶಿ ರಾಷ್ಟ್ರಗಳಿಗೆ ರಫ್ತು ಮಾಡುವ ಮೂಲಕ ಭಾರತದ ರಾಷ್ಟ್ರೀಯ ಆದಾಯ ಹಾಗೂ ಕರ್ನಾಟಕದ ರಾಜ್ಯದ ಬೊಕ್ಕಸಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದೆ. ಅದ್ದರಿಂದ ಇಂತಹ ಉತ್ಪಾದನೆಯಲ್ಲಿ ಅನೇಕ ಜನ ಕೆಲಸಗಾರರು ಬೇಕಾಗುತ್ತದೆ. ಸ್ಥಳೀಯ ಜನರಲ್ಲದೆ, ದೂರದ ಊರುಗಳಿಂದ ಬಂದು ಗಾಣಿಗಾರಿಕೆ ಕೆಲಸದಲ್ಲಿ ತೊಡಗಿದ್ದಾರೆ.

ತಾಲೂಕಿನಾದ್ಯಾಂತ ಸುಮಾರು ೫೦ಕ್ಕೂ ಗಣಿ ಉತ್ಪಾದನಾ ಸಂಸ್ಥೆಗಳು ಕಾರ್ಯಾರಂಭಗೊಂಡಿವೆ. ಇಂತಹ ಅಪಾರವಾದ ಕಚ್ಚಾ ಖನಿಜ ಸಂಪನ್ಮೂಲದ ಸದ್ಬಳಕೆಗಾಗಿ ಗಣಿ ಉದ್ಯಮಕ್ಕೆ ಪೂರಕವಾಗಿ ಸಂಡೂರು ತಾಲೂಕಿನ ಜಿಂದಾಲ್ ವಿಜಯನಗರ ಸ್ಟೀಲ್ ಲಿ ಮುಕುಂದಾ ಸ್ಟೀಲ್ ಅನೇಕ ಜನರಿಗೆ ಉದ್ಯೋಗಅವಕಾಶವನ್ನು ಒದಗಿಸಿಕೊಟ್ಟಿವೆ.

ಅಧ್ಯಯನದ ಪ್ರಕಾರ ತಾಲೂಕಿನಾದ್ಯಾಂತ ದೊರೆಯುವ ಖನಿಜ ನಿಕ್ಷೇಪಗಳಲ್ಲಿ ರೆಡ್ ಓಕಾರ್, ಎಲ್ಲೋ ಓಕಾರ್, ಸುಣ್ಣದ ಕಲ್ಲು ಹಾಗೂ ಚಿನ್ನ ಮತ್ತು ಬೆಳ್ಳಿಯ ಟಿಕ್ಷೇಪಗಳಿರುವುದನ್ನು ಈಗಾಗಲೇ ಪತ್ತೆ ಹಚ್ಚಲಾಗಿದೆ. ಭಾರತ ಸರ್ಕಾರದ ಆಧೀನ ಉದ್ಯಮ ಸಂಸ್ಥೆಯಾದ ರಾಷ್ಟ್ರೀಯ ಖನಿಜ ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ಸರ್ಕಾರದ, ಆಧೀನ ಉಧ್ಯಮ ಸಂಸ್ಥೆಯಾದ ಮೈಸೂರು ಮಿನರಲ್ಸ್‌ನ ಜೊತೆಗೆ ತಾಲೂಕೀನಲ್ಲಿಯೇ ಅರವತ್ತಕ್ಕೂ ಹೆಚ್ಚು ಖಾಸಗಿ ಗಣಿ ಸಂಸ್ಥೆಗಳಲ್ಲಿ ಜನರು ಕೆಲಸದಲ್ಲಿ ತೊಡಗಿದ್ದಾರೆ. ಹೆಚ್ಚಾಗಿ ಗಣಿಗಾರಿಕೆಯಲ್ಲಿ ತೊಡಗಿದರು ಸಹ ಕೃಷಿಯ ಚಟುವಟಿಕೆಯನ್ನು ಉಳಿಸಿಕೊಂಡು ಹೋಗಿದ್ದಾರೆ. ಆಹಾರ ಧಾನ್ಯಗಳಾದ, ಜೋಳ, ರಾಗಿ, ಭತ್ತ, ಸಜ್ಜೆ, ನವಣೆ, ಮುಂತಾದ ಬೆಳೆಗಳನ್ನು ಬೆಳೆಯುತ್ತಾರ ಹಾಗು ವಾಣಿಜ್ಯ ಬೆಳಗಳನ್ನು ಸಹ ಕೃಷಿಯಲ್ಲಿ ಬೆಳೆಯುತ್ತಾರೆ. ಅವುಗಳೆಂದರೆ, ಮೆಕ್ಕೆಜೋಳ, ಸೂರ್ಯಕಾಂತಿ ಈರುಳ್ಳಿ ತೆಂಗು ಬಾಳೆ ಇನ್ನು ಕೆಲವು ತರದ ವಾಣಿಜ್ಯ ಬೆಳೆಯುತ್ತಾರೆ ಹಾಗು ತರಕಾರಿಗಳನ್ನು ಮಾವಿನ ಹಣ್ಣುಗಳನ್ನು ಸಹ ಬೆಳೆಯುತ್ತಾರೆ.

## ಸಂಡೂರಿನ ಗಣಿಗಾರಿಕೆ

ಪ್ರಕೃತಿಯ ಸೊಬಗಿನೊಂದಿಗೆ ಖನಿಜ ನಿಕ್ಷೇಪವೂ ಸಂಡೂರಿನ ವರ ದಟ್ಟವಾದ ಅರಣ್ಯ ಸಂಪತ್ತಿನಲ್ಲಿ ಅನೇಕ ಬೆಲೆಬಾಳುವ ಮರ ಗಿಡ ಔಷಧಿ ಸಸ್ಯಗಳು ಕಾಡು ಪ್ರಾಣಿಗಳು ಹೇರಳವಾಗಿವೆ. ಇವುಗಳನ್ನು ಸಂಡೂರಿನ ಅಧಿದೇವತೆ, ಕುಮಾರಸ್ವಾಮಿ ಕಾಪಾಡುತ್ತಿದ್ದಾನೆ. ಇದರಿಂದ ಸಂಡೂರಿನ ಜನತೆ ಹಾಗೂ ಪ್ರಾಣಿ ಸಂಕಲ್ಪವು ಸುಖ ಸಂಪತ್ತಿನಿಂದ ಇದ್ದಾರೆ. ಆದರೆ ಆಧುನಿಕ ಯುಗದಲ್ಲಿ ಈ ಪರಿಸರ ಕಂಡಾಗ ಬೇರೆಯೇ ಕಾಣುತ್ತದೆ. ಸಂಡೂರಿನ ರಾಜ ಮನೆತನ ಹಾಗೂ ಶಾಸಕರು ಆಳ್ವಿಕೆಯ ಅಡಿಯಲ್ಲಿ ಅಧೀನದಲ್ಲಿರುವ ಖನಿಜ ನಿಕ್ಷೇಪಗಳು ೨೦೦೦ ಹೆಕ್ಟೇರ್ ಪ್ರದೇಶ ಇಲ್ಲಿ ಅನೇಕ ಶ್ರೀಮಂತರ ಗಣಿ ಗೇಣಿ ರೂಪದಲ್ಲಿ ಗಣಿಗಾರಿಕೆ ಮಾಡುತ್ತಿದ್ದಾರೆ.

ಸಂಡೂರಿನ ಬಹುತೇಕ ಜನರು ವ್ಯವಸಾಯ ಮಾಡುವವರಾಗಿದ್ದರೆ. ಕೆಲವು ಭೂಮಿಗಳು ನೀರಾವರಿ ಹಾಗೂ ಹಲವು ಭೂಮಿಗಳು ಮಳೆ ಆಧರಿಸಿವೆ. ಮಳೆ ಕಡಿಮೆಯಾದ ಕಾರಣ ಆಧಾರಿತ ಭೂಮಿಗಳನ್ನು ಹಿಂದಿನ ದಿನ ಗಣಿಗಾರಿಕೆ ಮಾಡಿಸಿ ಸಂಡೂರಿನ ಸುಮಾರು ೬೦ ರಷ್ಟು ಜನರು ಸುಖ ಜೀವನ ನಡೆಸುತ್ತಿದ್ದಾರೆ. ಆರ್ಥಿಕ ಪರಿಸ್ಥಿತಿ ಸುಧಾರಿಸಿದೆ. ಆಧುನಿಕ ಸೌಲಭ್ಯ ಹೊಂದಿರುವ ಸಂಡೂರು ಉತ್ತಮ ಕಟ್ಟಡಗಳಿಂದ ವಿದ್ಯುತ್ ವ್ಯವಸ್ಥೆಗಳಿಂದ ವಾಹನಗಳ ಸೌಲಭ್ಯಗಳಿಂದ ಮೊಬಲ್ ತಮ್ಮದೇ ಸ್ಥಾನ ಪಡೆದಿವೆ. ಹೊರ ರಾಜ್ಯಗಳಿಂದ ಬಂದವರಿಗೆ ಗಣಿಗಾರಿಕೆ ಕಲ್ಪವೃಕ್ಷವಾಗಿದೆ. ಆದರೆ ಪರಿಸರ ಕಳಕಳಿ ಯಾರಿಗೂ ಇಲ್ಲ, ಎಲ್ಲರಿಗೂ ಸಂಡೂರು ಆದಾಯ ಮೂಲವಾಗಿದೆ.

ಸಂಡೂರು ತಾಲೂಕಿನ ಕಬ್ಬಿಣದ ಅದಿರಿಗೆ ವಿದೇಶದಲ್ಲಿ ಭಾರಿ ಬೇಡಿಕೆ ಇರುವುದರಿಂದ ಇದರ ಪ್ರಮಾಣ ಗುಣಮಟ್ಟದ್ದಾಗಿರುವುದರಿಂದ ವಿದೇಶಿ ಕೈಗಾರಿಕೋದ್ಯಮದವರು ದಿನೇದಿನೇ ಸಂಡೂರಿನತ್ತ ಪ್ರಯಾಣ ಬೆಳೆಸುತ್ತಿದ್ದಾರೆ. ಇದರಿಂದ ಇಲ್ಲಿನ ಮಾಧ್ಯಮಗಳೊಂದಿಗೆ ಸಂಪರ್ಕ ಉತ್ತಮವಾಗಿದೆ. ಇಲ್ಲಿನ ಗಣಿಗಾರಿಕೆಯ ವಸ್ತುಗಳು ಭಾರಿ ಬೇಡಿಕೆ ಇರುವುದರಿಂದ ಇದನ್ನು ಸಾಗಿಸಲು ರಸ್ತೆಗಳ ಮೂಲಕ ಲಾರಿಗಳನ್ನು, ರೈಲುಗಳನ್ನು ಉಪಯೋಗಿಸಿ ನಂತರ ವಿದೇಶಕ್ಕೆ ಹಡಗಿನ ಮೂಲಕ ಅದಿರನ್ನು ಸಾಗಿಸಲಾಗುತ್ತದೆ. ಇದರಿಂದ ಮಾರ್ಗ ಮಧ್ಯದಲ್ಲಿ ಜನರ ಉಪಜವನ ನಡೆಯುತ್ತದೆ. ಹಾಗೆಂದರೆ ಸಾರಿಗೆಯಿಂದ ಅನೇಕ ರೀತಿಯ ವ್ಯಾಪರಿಗಳು ತಮ್ಮ ಮೂಲ ಅವಶ್ಯಕ ವಸ್ತುಗಳನ್ನು ಮಾರಟ ಮಾಡುತ್ತಾರೆ.

ಇಂದು ಕರ್ನಾಟಕ ರಾಜ್ಯದಲ್ಲಿ ಅತ್ಯಧಿಕ ತೆರಿಗೆಯನ್ನು ಸಲ್ಲಿಸುವ ಸಾಲಿನಲ್ಲಿ ಸಂಡೂರು ಎರಡನೇ ಸ್ಥಾನದಲ್ಲಿದೆ. ಒಂದು ತಿಂಗಳಿಗೆ ಸುಮಾರು ೨೦೦೦೨೫ ಕೋಟಿ ಇತರೆ ಎಲ್ಲಾ ರೀತಿಯ ತೆರಿಗೆ ಸರ್ಕಾರಕ್ಕೆ ಹೋಗುತ್ತದೆ. ಇದರಿಂದ ಸರ್ಕಾರದ ಆದಾಯ ಲಾಭದಾಯಕರವಾಗಿದೆ.

## ಗಣಿಗಾರಿಕೆಯಿಂದಾಗುವ ಪರಿಣಾಮಗಳು :-

೧. ಅನಾರೋಗ್ಯ

೨. ಅರಣ್ಯನಾಶ

೩. ಸಾರಿಗೆ & ವ್ಯವಸ್ಥೆ

೪. ಅನರಕ್ಷತೆ

೫. ಬಾಲಕಾರ್ಮಿಕ ಪದ್ದತಿ

### ೧. ಅನಾರೋಗ್ಯ

ಅರಣ್ಯದಲ್ಲಿರುವ ಖನಿಜಾಂಶಗಳನ್ನು ಅಂದರೆ ಅದಿರನ್ನು ಹೊರತೆಗೆಯುವುದರಿಂದ ಅಲ್ಲಿ ಧೂಳು ಅಧಿಕ ಮಟ್ಟದಲ್ಲಿದೆ. ಇದರಿಂದ ಗಣಿಗಾರಿಕೆಗಳಲ್ಲಿ ಸಂಡೂರಿನಲ್ಲಿ ಸಂಪೂರ್ಣ ಧೂಳುಮಯ ವಾತಾವರಣವಿದೆ. ಇದು ಹಲವಾರು ಮಾರಕ ರೋಗಗಳಿಗೆ ಕಾರಣವಾಗಿದೆ. ಅಸ್ತಮಾ ಇಲ್ಲಿ ಪ್ರಮುಕವಗಿದೆ. ಆನರಿಗೆ ಅಧಿಕ ಹಣ ದೊರೆಯುವುದರಿಂದ ಜನ ಅನೇಕ ದುಶ್ಚಟಗಳಿಗೆ ಬಲಿಯಾಗುತ್ತಿದ್ದಾರೆ. ಗುಟಕಾ, ತಂಬಾಕು ಸೇವನೆ ಅನೈತಿಕತೆ ಸ್ವಚ್ಛವಿಲ್ಲದ ಆಹಾರ ಸೇವನೆ ಅಶುದ್ದವಾದ ಗಾಳಿ ವತಾವರಣದ ಕೊರತೆ ಇಲ್ಲಿ ತಾಂಡವಾಡುತ್ತಿದೆ.

### ೨. ಅರಣ್ಯನಾಶ

ಖನಿಜ ನಿಕ್ಷೇಪಗಳಿಗಾಗಿ ಕಡಿದಾದ ಅರಣ್ಯವನ್ನು ಕಡಿದು ಅರಣ್ಯ ಸಂಪತ್ತನ್ನು ಹಾಳು ಮಾಡುತ್ತಿದ್ದಾರೆ. ಇದರಿಂದ ಸರಿಯಾಗಿ ಮಳೆ ಬರದೇ ಹೋಗುತ್ತದೆ. ರೈತರಿಗೆ ಬೆಳೆ ಸರಿಯಾಗಿ ಬರುವುದಿಲ್ಲಾ ಹಗೂ ಮಳೆ ಬಂದಾಗ ಅಧಿಕ ಖನಿಜಾಂಶವು ಹೊಲಗಳಿಗೆ ಹರಿದು ಬರುವುದರಿಂದ ಫಲವತ್ತಾದ ಭೂಮಿ ಮರುಭೂಮಿಯಾಗುತ್ತದೆ.

ಜೊತೆಗೆ ಅಧಿಕವಾದ ಪರಿಸರ ಮಾಲಿನ್ಯ ಉಂಟಾಗುತ್ತದೆ. ಶುದ್ಧವಾದ ನೀರು, ಗಾಳಿಗೂ ಕೊರತೆ ಉಂಟಾಗಿದೆ. ಜೊತೆಗೆ ಜನರು ದಿಡೀರನೆ ಶ್ರೀಮಂತರಾಗಲು ಆಹಾರ ಧಾನ್ಯಗಳನ್ನು ಬೆಳೆಯುವ ಹೊಲಗಳಿಂದ ಖನಿಜಾಂಶವನ್ನು ಸರ್ಕಾರದ ಪರವಾನಿಗೆ ಇಲ್ಲದೇ ಅಕ್ರಮ ಗಣಿಗಾರಿಕೆ ನಡೆಸುತ್ತಿದ್ದಾರೆ.

ಸಂಡೂರು ಬಳ್ಳಾರಿ ಜಿಲ್ಲೆಯಲ್ಲಿ ಅತಿ ಹೆಚ್ಚು ಮಳೆ ಬೀಳುವ ಪ್ರದೇಶವಾಗಿದೆ. ಇದು ಮಳೆಯಿಂದಾಗಿ ವಿವಿಧೆಡೆಯಲ್ಲಿ ಸಣ್ಣ–ಪುಟ್ಟ ಕೆರೆಗಳನ್ನು ಹೊಂದಿದೆ. ತಾಲೂಕಿನ ಪ್ರಮುಖ ಜಲಮೂಲ ನಾರಿಹಳ್ಳವಾಗಿದೆ. ಇದಕ್ಕೆ ತಾರಾನಗರದ ಹತ್ತಿರ ಆಣೆಕಟ್ಟನ್ನು ಕಟ್ಟಲಾಗಿದೆ. ಈ ಆಣೆಕಟ್ಟು ಸುಮಾರು ೨೯೫ ಮೀಟರ್ ಉದ್ದ, ೨೦೯೨ ಮೀ ಅಗಲವಿದೆ. ಈ ಡ್ಯಾಂ ೨೫೫.೦೮ ಹೆಕ್ಟೇರುಗಳಷ್ಟು ಕಾಲುವೆಗಳ ಮೂಲಕ ಹೊಂದಿದೆ. ಸುಮಾರು ೮೦೦ ಹೆಕ್ಷೇರುಗಳಷ್ಟು ಕಾಲುವೆಗಳ ಮೂಲಕ ನೀರನ್ನು ಕೃಷಿಕರಿಗೆ ಉಪಯೋಗಿಸುತ್ತಾರೆ. ಅಲ್ಲದೇ ಸುತ್ತ–ಮುತ್ತ ಹಳ್ಳಿಗಳಿಗೆ ಕುಡಿಯುವ ನೀರನ್ನು ಈ ಡ್ಯಾಂ ನಿಂದಲೇ ಸರಬರಾಜು ಮಾಡಲಾಗಿದೆ. ಈ ನೀರಿನ ಶೇಖರಣೆಯಿಂದ ಸುತ್ತ–ಮುತ್ತ ಪ್ರದೇಶದಲ್ಲಿ ಅಂತರ್ಜಲ ಹೆಚ್ಚಾಗಿದೆ. ಆದರೆ ಗಣಿಗಾರಿಕೆಯಿಂದ ನಾರಿಹಳ್ಳ ಸಂದ ಅಪಾಯದ ಹಂಚಿನಲ್ಲಿ ಇದೆ ಕಾರಣ ಗಣಿಯಿಂದ ತ್ಯಾಜ್ಯ ಅದಿರು ನೀರಿನ ಮೂಲಕ ಹರಿದು ಬರುತ್ತದೆ.

ಸಂಡೂರಿನಲ್ಲಿ ಬೆಟ್ಟಗುಡ್ಡಗಳು ಅರಣ್ಯ ಬಿಟ್ಟರೆ ಉಳಿದೆಡೆ ಗಿಡ–ಮರಗಳು ಕಡಿಮೆ ಇದನ್ನು ಹುಲ್ಲುಗಾವಲು ಎಲೆ ಉದಿರುವ ಪ್ರದೇಶವೆಂದು ಗುರುತಿಸಲಾಗಿದೆ. ಇಲ್ಲಿನ ಗುಡ್ಡಗಳು ಸುಮಾರು ೨೦೦೦ ಕ್ಕು ಹೆಚ್ಚು ಹೂ ಬಿಡುವ ಸಸ್ಯಗಳು ಹಾಗೂ ೨೦.೦೦೦ ಹೆಚ್ಚು ಔಷಧಿಯ ಗಿಡಗಳು ಕಂಡು ಬರುತ್ತವೆ. ಇಲ್ಲಿನ ಯಶವಂತನಗರದ ಹತ್ತಿರ ಔಷಧಿವನ ಮಾಡಿದ್ದು ಔಷಧಿ ಸಸ್ಯಗಳ ಸಂರಕ್ಷಣಾ ಕೇಂದ್ರ ತೆರೆಯಲಾಗಿದೆ. ಸಂಡೂರಿನ ಕಾಡುಗಳಲ್ಲಿ ಹೆಚ್ಚಾಗಿ ದಿಂಡಿನ ಮರ, ಹುಣಸೆ, ಶ್ರೀಗಂಧ, ಬೇವು, ಈಚಲು, ಬಿಳಿಜಾಲಿ, ಬೀಟೆ, ತೇಗ, ಬಾಗೆ, ಮೋಸಬಾಳೆ,ತೇರದ, ಕಿತ್ತಾಳೆ ಮುಂತಾದ ಮರಗಳು ಹೆಚ್ಚಾಗಿ ಕಂಡುಬರುತ್ತವೆ.

### ೩. ಸಾರಿಗೆ

ಸಂಡೂರು ಪ್ರದೇಶದಲ್ಲಿ ಬಹುದೊಡ್ಡ ಸಮಸ್ಯೆ ಎಂದರೆ ಇಲ್ಲಿನ ರಸ್ತೆಗಳು ಅಸ್ತವ್ಯಸ್ಥವಾಗಿರುವುದು, ಹೊರ ರಾಜ್ಯ ಹಾಗೂ ಇತರೆ ಜಿಲ್ಲೆಗಳಿಗೆ ಲಾರಿಗಳ ಮೂಲಕ ಅದಿರು ಸಾಗಾಣಿಕೆ ಮಾಡುವಗ ಲರಿಗಳಲ್ಲಿ ಅಧಿಕ ತೂಕದ ಅದಿರು ತುಂಬುವುದೇ ಕಾರಣ ರಸ್ತೆಗಳು ಹಾಳಾಗಿವೆ. ರಸ್ತೆಗಳಲ್ಲಿ ಅನೇಕ ಗುಂಡಿಗಳು ಬಿರುಕು ಇವೆ. ಇದರಿಂದ ಸಾರ್ವಜನಿಕರಿಗೆ ತೊಂದರೆಯಾಗಿದೆ. ದಟ್ಟವಾದ ಲಾರಿಗಳ ಸಂಚಾರದಿಂದ ರಸ್ತೆ ತಡೆಯಾದರೆ ಬಹು ಬೇಗನೆ ಬಗೆಹರಿಸಲು ಸಾಧ್ಯವಿಲ್ಲ ಇದರಿಂದ ಸರಿಯಾದ ಸಮಯಕ್ಕೆ ಹೋಗಲು ಸಾರ್ವಜನಿಕರು ಹರ ಸಾಹಸವನ್ನು ಮಾಡಬೇಕಾಗುತ್ತದೆ. ಮುಖ್ಯವಾಗಿ ಅಪಘಾತದ ಭಯವು ತಪ್ಪದಲ್ಲಿ ಪ್ರತಿನಿತ್ಯ ಶೇ. ೧೪% ರಷ್ಟು ಅಪಘಾತಗಳು ೫% ರಷ್ಟು ಸಾವು ಸಂಭವಿಸುತ್ತಿವೆ.

### ೪. ಅನರಕ್ಷತೆ

ಹಣದ ಆಸೆಗಾಗಿ ಹಿರಿಯರು ತಮ್ಮ ಮಕ್ಕಳನ್ನು ಕೆಲಸಕ್ಕೆ ಕಳುಹಿಸುತ್ತಿದ್ದಾರೆ. ಮಕ್ಕಳ ಉಜ್ವಲ ಭವಿಷ್ಯ ಕೈಬಿಟ್ಟು ಗಣಿಗಾರಿಕೆಯಲ್ಲಿ ಹಲವು ವಿಧಧ ಕೆಲಸ ಮಾಡುತ್ತಿದ್ದರೆ. ಮಳೆ ಆಧಾರಿತ ಭೂಮಿಗಳ ಒಡೆಯರು ಇಂದು ಹಣಕ್ಕಾಗಿ ಉತ್ತಮ ಜೀವನ ಪದ್ದತಿಗಾಗಿ ಗಣಿಗಾರಿಕೆಯನ್ನು ನಂಬಿದ್ದಾರೆ. ಇದು ಮಕ್ಕಳ ಶೈಕ್ಷಣಿಕ ಬದುಕಿಗೆ ಧಕ್ಕೆಯಾಗುತ್ತಿದೆ.

### ೫. ಬಾಲ ಕಾರ್ಮಿಕ ಪದ್ದತಿ

ಹಣದ ಆಸೆಗಾಗಿ ಚಿಕ್ಕ ಮಕ್ಕಳನ್ನು ಗಣಿಗಾರಿಕೆ ಕೆಲಸಕ್ಕೆ ಕಳುಹಿಸುತ್ತಾರೆ. ಇದರಿಂದ ಮಕ್ಕಳ ಆರೋಗ್ಯ ಬೆಳವಣಿಗೆ ಬುದ್ದಿಮಟ್ಟ ಕುಂಠಿತಗೊಳ್ಳುತ್ತದೆ. ಅವರ ಮುಂದಿನ ಭವಿಷ್ಯ ಕೂಡು ಹಾಳಾಗುತ್ತದೆ. ಚಿಕ್ಕ ವಯಸ್ಸಿನಲ್ಲಿ ಮಕ್ಕಳ ಹಣವನ್ನು

ಕಾಣುವುದರಿಂದ ಅನೇಕ ಕೆಟ್ಟ ಚಟಗಳಿಗೆ ಬಲಿಯಾಗುತ್ತಾರೆ. ಸಮಾಜಕ್ಕೆ ಧಕ್ಕೆಯನ್ನು ತರುತ್ತಾರೆ.

ಹಿಂದೆ ೧೬೪೨ ರಲ್ಲಿ ವಿದೇಶಿ ಪ್ರವಾಸಿಗ see sandur in september ಎಂದು ಹೇಳಿದ್ದರು, ಆದರೆ ಇಂದು ಇಲ್ಲಿನ ಪರಿಸರ ವಾತಾವರಣ ನೋಡಿದರೆ ಅವರ ಕೇವಲ ನೆನಪು ಮಾತ್ರವಗಿದೆ. ಅದು ಮರೆಯಲು ಸಾಧ್ಯವಿಲ್ಲ.

## ಅಧ್ಯಾಯ – ೩.
## ಶ್ರೀ ಗಂಡಿ ನರಸಿಂಹಸ್ವಾಮಿಯ ವಿಶ್ಲೇಷಣೆ

ಪುರಾಣಗಳು ಹೇಳುವ ಹಾಗೆ ನರಸಿಂಹಸ್ವಾಮಿ ಬಗ್ಗೆ ಕಥೆಗಳನ್ನು ಸಹ ಕಾಣಬಹುದು ಗಂಡಿ ನರಸಿಂಹ ಸ್ವಾಮಿಯ ಬಗ್ಗೆ ಯಾವುದೇ ಲಿಖಿತ ಆಧಾರಗಳು ದೊರಕದ ಕಾರಣ ವಕ್ತೃತಗಳ ಆಧಾರದಿಂದ ಶ್ರೀ. ಗಂಡಿನರಸಿಂಹಸ್ವಾಮಿಯ ಪರಿಚಯವನ್ನು ನರಸಿಂಹಸ್ವಾಮಿಯ ಪದ ನಿಷ್ಪತ್ತಿ, ಹಿನ್ನೆಲೆ, ದೇವಸ್ಥಾನದ ಆಡಳಿತದಿಂದ ತಿಳಿದು ಕೊಳ್ಳಬಹುದಾಗಿದೆ.

**೧.ಪದ ನಿಷ್ಪತ್ತಿ:–**

ಪುರಾಣಗಳಲ್ಲಿ ನರಸಿಂಹನನ್ನು ಉಗ್ರನರಸಿಂಹ ಎಂದು ಕರೆಯುತ್ತಾರೆ. ಇಲ್ಲಿ ಶ್ರೀ ಗಂಡಿನರಸಿಂಹಸ್ವಾಮಿ ಎಂದು ಕರೆಯುತ್ತಾರೆ. ಆದ್ದರಿಂದ ಗಂಡಿನರಸಿಂಹ ಸ್ವಾಮಿ ಪದ ನಿಷ್ಪತ್ತಿ ಪ್ರಮುಖವಾಗಿದೆ. ಗಂಡಿನರಸಿಂಹ ಎಂಬ ಶಬ್ದವು ಮೊದಲು ನೋಡಲಾಗಿ ಕಂಡಿಯಲ್ಲಿ ಮೂರ್ತಿಯು ಒಡಮೂಡಿರುವುದರಿಂದ ಗಂಡಿನರಸಿಂಹವೆಂದು ಕರೆದಿರಬಹುದು. **'ಕ'** ಕಾರ, **'ಗ'** ಕಾರವಾಗಿದೆ. ಕಂಡಿ > ಗಂಡಿ = ಗಂಡಿ ನರಸಿಂಹವಾಗಿದೆ. ಗಂಡಿ ನರಸಿಂಹ ಪದನಿಷ್ಪತ್ತಿ ಎರಡನೇ ಪ್ರಕಾರ ದೊಡ್ಡ ಬೆಟ್ಟ ನೀರಿನಿಂದ ಕೊರಕಲು ಬಂದು ಕಂಡಿ ಬಿದ್ದಿತ್ತು, ಅಲ್ಲಿಯೇ ನರಸಿಂಹಸ್ವಾಮಿ ದೇವಲಾಯ ಇರುವುದರಿಂದ ಗಂಡಿ ನರಸಿಂಹ ಎಂದು ಕರೆದಿರಬಹುದಾಗಿದೆ.

**೨.ಹಿನ್ನೆಲೆ:-**

ಶ್ರೀ ಗಂಡಿ ಲಕ್ಷ್ಮಿ ನರಸಿಂಹ ಸ್ವಾಮಿಯ ಬಗ್ಗೆ ಸುಮಾರು ಎಂಟುನೂರು ವರ್ಷಗಳ ಕಾಲ ಇತಿಹಾಸವಿದೆ. ಶ್ರೀ ಗಂಡಿ ಲಕ್ಷೀನರಸಿಂಹ ಸ್ವಾಮಿಯ ಹಿನ್ನೆಲೆಯು ವಕ್ತೃತಿಗಳ ಬಾಯಿಯಲ್ಲಿ ತಮ್ಮದೆ ಆದ ನಿಲುವುಗಳನ್ನು ಹೊಂದಿದೆ.

ಸುಮಾರು ೮೦೦ ವರ್ಷಗಳ ಹಿಂದೆ ಒಂದು ಹಸು ಪೊದೆಯಲ್ಲಿ ಹೋಗಿ ಬರುತ್ತಿತ್ತು ಏಕೆ ಈ ಹಸು ಪ್ರತಿದಿನ ಈ ಪೊದೆಯಲ್ಲಿ ಹೋಗಿ ಬರಲು ಕಾರಣ ತಿಳಿಯಲು ಧನಕಾಯುವವನು ಒಂದು ದಿನ ಕಾದು ಕುಂತ್ತ ಹಸು ಬಂದು ಹಾಲು ಕೊಡುವ ದೃಶ್ಯವನ್ನು ನೋಡಿದ. ಆರ್ಶ್ಚಯದಿಂದ; ಅಲ್ಲಿ ಏನು ಇದೆ? ಎಂದು ತಿಳಿಯಲು ಅಲ್ಲಿ ಯಾವುದೇ ಆಗಾದಶಕ್ತಿ ಅಡಗಿದೆ ಎಂದು ತಿಳಿದು ಪೂಜಿಸಿದರು. ಹಾಲು ಕೊಡುವ ಹಸು ಎಲ್ಲಿಂದ ಬಂದಿದೆ? ಎಂದು ತಿಳಿಯಲು ಅದರಿಂದೆ ಹೋದರು. ಅದು ಅಲ್ಲಿಯೇ ಪಕ್ಕದ ಊರಾದ ಸುಶೀಲ ನಗರದಿಂದ ಪ್ರತಿದಿನ ಬರುತ್ತಿತ್ತು. ಇಲ್ಲಿ ಹಾಲು ಕೊಟ್ಟುಹೋದರೆ ಮಾತ್ರ ಮನೆಯಲ್ಲಿ ಹೆಚ್ಚಾಗಿ ಹಾಲು ಕೊಡುತ್ತಿತ್ತು. ಎಂದು ಮನುಷ್ಯರ ಕಣ್ಣಿಗೆ ದೇವರಿಗೆ ಹಾಲು ಕೊಡುವುದನ್ನು ನೋಡಿದ್ದರಿಂದ ಅಂದು ಅದು ಮರಣ ಹೊಂದಿತು. ಈ ಪ್ರಕಾರ ಜನರು ಅಲ್ಲಿ ದೇವರು ವಾಸ ಮಾಡಿರುವುದನ್ನು ಕಂಡರು. ಪೂಜಾರಿಯನ್ನು ನೇಮಿಸಿ ಪೂಜೆ ಮಾಡತೊಡಗಿದರು. ಪೂಜಾರಿಯ ಮಗನೆ ಗವಿಯಲ್ಲಿ ಕಾಣೆಯಾದ. ಇದರಿಂದ ಜನರು ಭಯಬೀತರಾಗಿ ಸಾಮಾನ್ಯ ದೇವರಲ್ಲ, ಉಗ್ರರೂಪದ ದೇವೆರೇ ವಾಸ ಮಾಡಿರಬಹುದು ಎಂದು ತಿಳಿದು ಗಂಡಿಯಲ್ಲಿ ಒಡಮೂಡಿರುವುದರಿಂದ ಗಂಡಿನರಸಿಂಹ ಎಂದು ಕರೆದರು. ನರಸಿಂಹ ಸ್ವಾಮಿ ಉಗ್ರರೂಪವನ್ನು ತಾಳಿದ್ದರಿಂದ ಜೋತೆಗೆ ಲಕ್ಷ್ಮೀ ನರಸಿಂಹಸ್ವಾಮಿ ಎಂದು ಕರೆಯುತ್ತಾರೆ. ಅಂದಿನಿಂದ ಇಂದಿನ ವರೆಗೆ ಈ ದೇವರ ಬಗ್ಗೆ ಜನರಲ್ಲಿ ಭಯ - ಭಕ್ತಿಯನ್ನು ಕಾಣಬಹುದು. ಪ್ರತಿ ವರ್ಷಹೋಳಿ ಹುಣ್ಣಿಮೆ ದಿನ ಜಾತ್ರೆಯನ್ನು ಮಾಡುತ್ತಾರೆ. ಈ ದೇವ ಸ್ಥಾನದ ಸುತ್ತ - ಮುತ್ತ ಅಪಾರ ಕಬ್ಬಿಣದ

ಅದಿರು ಇರುವುದರಿಂದ ಅನೇಕ ಕಂಪನಿಗಳು ತಲೆ ಎತ್ತಿವೆ ಈ ಕಂಪನಿಗಳು ಸಹ ಅರ್ಥಿಕವಾಗಿ, ಸಮಾಜಿಕವಾಗಿ ಕಾರ್ಯನಿರ್ವಹಿಸುತ್ತಾವೆ.

**೩.ದೇವಸ್ಥಾನದ ಆಡಳಿತ:-**

ಶೀ ಗಂಡಿ ಲಕ್ಷ್ಮೀ ನರಸಿಂಹಸ್ವಾಮಿಯ ದೇವಾಲಯವು ಸುಟ್ಟ ಇಟ್ಟಿಗೆ, ಕಲ್ಲು, ಮಣ್ಣುಗಳಿಂದ ನಿರ್ಮಿತವಾಗಿದೆ. ಗರ್ಭಗುಡಿ ಗುಹೆಯಲ್ಲಿದೆ. ಮುಖ ಮಂಟಪ ನಾಲ್ಕು ಕಲ್ಲಿನ ಕಂಬಗಳಿಂದ ನಿರ್ಮಾಣವಾಗಿದೆ. ಗರ್ಭಗುಡಿಗೆ ಅಥವಾ ಮುಖ್ಯದ್ವಾರಕ್ಕೆ ಹೊಗುವ ಗಾದಿಯಲ್ಲಿ ಸುಟ್ಟಕಲ್ಲುಗಳಿಂದ ಮೆಟ್ಟಲುಗಳನ್ನು ಹಾಕಲಾಗಿದೆ. ದೇವಸ್ಥಾನದ ಪಕ್ಕ ದೊಡ್ಡ – ದೊಡ್ಡ ಹುಣಿಸೆ ಮರಗಳಿಂದ ಅಲಂಕೃತವಾಗಿದೆ. ದೇವಾಲಯದ ಹಿಂದೆ ಬೃಹದಾಕಾರದ ಹೆಬ್ಬಂಡೆಇದೆ. ಶೀ ಗಂಡಿ ಲಕ್ಷ್ಮೀ ನರಸಿಂಹಸ್ವಾಮಿ ದೇವಲಾಯವು ಪ್ರವಾಸಿ ತಾಣವಾಗಿದೆ.

ಶೀ ಗಂಡಿ ಲಕ್ಷ್ಮೀ ನರಸಿಂಹ ಸ್ವಾಮಿ ದೇವಲಾಯವು ಮೊದಲಿಗೆ ಧರ್ಮಾಪುರ ಗ್ರಾಮದವರು ಆಡಳಿತವನ್ನು ನೊಡಿಕೊಳ್ಳುತ್ತಿದ್ದರು. ಕ್ರಮೇಣವಾಗಿ ಈ ದೇವಾಲಯವು ಸಂಡೂರು ರಾಜಮನೆತನಕ್ಕೆ ಸೇರಿತು. ಅಂದಿನಿಂದ ಇಂದಿನ ವರೆಗೆ ಘೋರ್ಪಡೆಯವರು ಈ ದೇವಾಲಯದ ಆಡಳಿತವನ್ನು ನೊಡಿಕೊಳ್ಳುತ್ತಾರೆ. ಇವರ ಆಡಳಿತ ಕಛೇರಿ, ಅರಮನೆ ಟ್ರಸ್ಟವಾಗಿದೆ. ಇವರು ಪ್ರತ್ಯೇಕವಾದ ಆಡಳಿತ ಅಧಿಕಾರಿಯನ್ನು ನೇಮಿಸಿ, ಅವರಿಗೆ ಸಂಬಳ, ಭತ್ಯೆಯನ್ನು ಕೊಡುತ್ತಾರೆ. ಪೂಜಾರಿ, ಸಹಾಯಕ ಪೂಜಾರಿ, ಕಾವಲುಗಾರ ಇವರನ್ನು ಆಯ್ಕೆಮಾಡಿ ಅವರಿಗೆ ತಿಂಗಳ ಸಂಬಳ ಹಾಗೂ ಭೆತ್ಯವನ್ನು ಕೊಡುತ್ತಾರೆ. ಮೊದಲಿಗೆ ಬಿ.ಎಂ. ಕುಂಟೆ ಯವರು ನರಸಿಂಹಸ್ವಾಮಿ ದೇವಾಲಯದ ಆಡಳಿತವನ್ನು ನೊಡಿಕೊಳ್ಳುತ್ತಿದ್ದರು. ಈಗಲೂ ನಹ ಆರಮನೆಯ ಅಡಳಿತದವರೆ ನೋಡಿಕೊಳ್ಳತ್ತಾರೆ.

## ಅಧ್ಯಾಯ – ೪
## ಶ್ರೀಗಂಡಿ ನರಸಿಂಹಸ್ವಾಮಿ ಅವಲೋಕನ.

ಗಂಡಿನರಸಿಂಹಸ್ವಾಮಿಯ ಜನಪದರ ಆರಾಧ್ಯ ದೈವ ಶತಶತಮಾನಗಳಿಂದಲೂ ಜನಪದರು ಆರಾದಿಸುತ್ತ ಬಂದಿದ್ದು, ಇಂದಿಗೂ ಕೂಡ ಮುಂದುವರಿಸಿಕೊಂಡು ಹೊಗುತ್ತಿದ್ದಾರೆ.

**೧.ಆಚರಣೆ:–**

ಅನುಸರಿಸುವುದು, ಆಚರಿಸುವುದು ಸಂಪ್ರದಾಯದಂತೆ ನಡೆಯುವುದು ಎಂದು ಅರ್ಥೈಸಿಕೊಂಡಿದ್ದಾರೆ. ಮನುಷ್ಯನು ಅಗೋಚರವಾದ ದೈವಶಕ್ತಿಗಳ ಪ್ರಿತ್ಯಾರ್ಥವಾಗಿ ನಡೆಸುವ ಮತಾಚಾರಗಳು ಮತ್ತು ಕರ್ಮವಿಧಿಗಳನ್ನು ಆಚರಣೆಗಳೆಂದು ಕರೆಯುತ್ತಾರೆ. ಈ ಆಚರಣೆಗಳನ್ನು ಪರಂಪರಾಗತವಾಗಿ ಮುಂದುವರೆಸಿಕೊಂಡು ಬಂದಿರುವುದರಿಂದ ಇವುಗಳ ಹಿನ್ನೆಲೆಯಲ್ಲಿ ಬಲವಾದ ನಂಬಿಕೆಗಳು ಇರುತ್ತವೆ. ಆಚರಣೆಗಳು ಧಾರ್ಮಿಕ ವಲಯದಲ್ಲಿರುವುದೇ ಹಚ್ಚು ಈ ರೀತಿಯ ಆಚರಣೆಗಳನ್ನು ಅನುಷ್ಠಾನಕ್ಕೆ ತಂದರೆ, ತಾನು ನಂಬಿದ ಆಗೋಚರ ಮತ್ತು ಪವಿತ್ರ ವಸ್ತುಗಳಿಗೆ ತನ್ನ ಮೇಲೆ ಪ್ರೀತಿ ಉಂಟಾಗುತ್ತದೆ. ಎನ್ನುವುದು ಮನುಷ್ಯನ ನಂಬಿಕೆಯಾಗಿದೆ. ನಂಬಿಕೆ ಮತ್ತು ಆಚರಣೆಗಳು ಒಟ್ಟೊಟ್ಟಿಗೆ ಇದ್ದರೂ ಕೂಡ ಕೆಲವು ವೇಳೆ ಗೊತ್ತಿಲ್ಲದಂತೆಯೇ, ಅವೆರಡಕ್ಕೂ ಸಂಬಂದವೇ ಇಲ್ಲವೇನೋ ಎನ್ನುವ ಸಂದರ್ಭ ಬರಬಹುದು ಪಾವಿತ್ರ್ಯತೆಯ ಅಗೋಚರ ಶಕ್ತಿಗಳ ಬಗೆಗಿರುವ ಭಯದ ಕಾರಣಕ್ಕಾಗಿ ಆಚರಣೆಗಳನ್ನೇ ಭಕ್ತಿ – ಶ್ರದ್ದೆಗಳಿಂದ ನಡೆಸಲಾಗುವುದು. ಪ್ರಕೃತಿಯಲ್ಲಿ ಮತ್ತು ಮಾನವನ ದೇಹದಲ್ಲಿ ಉಂಟಾಗುವ ಬದಲಾವಣೆಯನ್ನು ಆಚರಣೆಗಳ ಮೂಲಕ ಗುರುತಿಸಲಾಗುತ್ತದೆ. ಆಚರಣೆಗಳನ್ನು ಮಾನವನ ಬದುಕಿಗೆ ಮತ್ತು ಆತನ ಭಾಹ್ಯ ಪ್ರಪಂಚಕ್ಕೆ ಸಂಬಂಧಿಸಿದ

ಆಚರಣೆಗಳು, ಆರ್ಥಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಆಚರಣೆಗಳು, ನೈಸರ್ಗಿಕ ಕ್ರಿಯೆಗಳಿಗೆ ಸಂಬಂದಿಸಿದ ಆಚರಣೆಗಳು, ಸಾಮಾಜಿಕ ರಚನೆಗಳಿಗೆ ಸಬಂಧಿಸಿದ ಆಚರಣೆಗಳು ಎಂದು ಸ್ಥೂಲವಾಗಿ ವಿಭಾಗಿಸಬಹುದು. ದೈವಕ್ಕೆ ಸಂಬಂಧಿಸಿದ ಆಚರಣೆಗಳನ್ನು ಜಾನಪದರು ದಿನಕ್ಕೊಂದು ಸಾರಿ, ವಾರಕ್ಕೊಂದು ಸಾರಿ, ವರ್ಷಕ್ಕೊಂದು ಸಾರಿ ಒಂದು ದೇವತೆಯ ಆರಾದನೆಯ ಹಿನ್ನೆಲೆಯಲ್ಲಿ ಆಚರಿಸುತ್ತಾರೆ. ಹೀಗೆ ಸಕಲ ಪೂರ್ವ ಸಿದ್ದತೆಗಳೊಂದಿಗೆ ಆಗುವ ಹಬ್ಬ – ಹರಿದಿನಗಳು, ತಿಥಿ – ಮತಿಗಳು, ಅನೇಕ ಆಚರಣೆಗಳ ಮೊತ್ತವಾಗುತ್ತದೆ.

ಹೀಗೆ ಒಂದು ದಿನಕ್ಕೊಮ್ಮೆ ಆಚರಿಸುವ ಆಚರಣೆಗಳನ್ನು ದೈನಿಕಾವರ್ತನದ ಆಚರಣೆಗಳೆಂದು, ವರ್ಷಕ್ಕೊಮ್ಮೆ ಆಚರಿಸುವ ಆಚರಣೆಗಳನ್ನು ವಾರ್ಷಿಕಾ ವರ್ತನದ ಆಚರಣೆಗಳೆಂದು, ಮನುಷ್ಯ ಹುಟ್ಟಿದಾಗಿನಿಂದ ಸಾಯುವವರೆಗೂ ಆಚರಣೆಗಳನ್ನು ಜಾವ ನಾವರ್ತನದ ಆಚರಣೆಗಳೆಂದು ಕರೆಯಲಾಗುತ್ತದೆ.

ಈ ರೀತಿಯ ಎಲ್ಲಾ ಆಚರಣೆಗಳನ್ನು ಸಂಡೂರು ಹಾಗೂ ಧರ್ಮಪುರ ಗ್ರಾಮದಲ್ಲಿ ಊರಿನ ಪರಿಶಿಷ್ಟ ಪಂಗಡದವರು, ಬ್ರಾಹ್ಮಣ, ಬಾರಿಕರು, ಮೂರುನಾಮದವರು, ವೀರಶೈವರು ಮುಂತಾದವರು ಕೂಡಿಯೇ ಆಚರಿಸುತ್ತಾರೆ. ಒಟ್ಟಾರೆ ಶ್ರೀ ಗಂಡಿ ಲಕ್ಷ್ಮಿನರಸಿಂಹ ಸ್ವಾಮಿಗೆ ಸಂಬಂಧಿಸಿದ ಆಚರಣೆಗಳನ್ನು ವಾರ್ಷಿಕಾವರ್ತನದ ಆಚರಣೆಗಳು ಮತ್ತು ಜೀವನಾರ್ತನದ ಆಚರಣೆಗಳು ಎಂದು ವಿಂಗಡಿಸಬಹುದು.

## ವಾರ್ಷಿಕಾವರ್ತನದ ಆಚರಣೆಗಳು

**ದಿನಂಪ್ರತಿ:–**

ಪ್ರತಿದಿನ ಸೂರ್ಯೋದಯಕ್ಕೆ ಮುಂಚೆಯೇ ಶ್ರೀ ಗಂಡಿನರಸಿಂಹಸ್ವಾಮಿಯ ಅರ್ಚಕನಾದ ರಾಮಕುಮಾರಭಟ್ಟರು ಸ್ನಾನಾದಿಗಳನ್ನು ಪೂರೈಸಿ ಮಡಿಯಿಂದ ಹಳ್ಳದಿಂದ ತಾಮ್ರದ ಕೊಡದಲ್ಲಿ ನೀರು ತಂದು ಮೂರ್ತಿಯನ್ನು ತೊಳೆದು ಹಾಗೂ ಬಾಗಿಲು, ಆವರಣವನ್ನು ಸ್ವಚ್ಚಗೊಳಿಸಿ, ಅಲ್ಲಿನ ಪ್ರಕೃತಿಯಲ್ಲಿ ದೊರೆಯುವ ಗಂಟೆ ಹೂ, ಸಂಪಿಗೆ, ಅಡವಿ ಮಲ್ಲಿಗೆ, ಕನಕಾಂಬರಿ ಹೂ ಮುಂತಾದ ಬಗೆ – ಬಗೆಯ ಕಾಡುಹೂವುಗಳಿಂದ ಸ್ವಾಮಿಯನ್ನು ಅಲಂಕಾರಿಸಿ ಪೂಜೆ ಮಾಡುತ್ತಾರೆ. ಊರಿನ ಹಲವಾರು ಜನ ಭಕ್ತರು, ಹಿರಿ – ಕಿರಿಯರು ಪ್ರತಿದಿನ ಬೆಳಗ್ಗೆ ಎದ್ದು ಮಡಿಯಿಂದ ನರಸಿಂಹಸ್ವಾಮಿ ಗುಡಿಗೆ ಹೋಗುತ್ತಾರೆ. ಹೂ, ಹಣ್ಣು, ಕಾಯಿ, ಹಂಪಲನ್ನು ಕೊಟ್ಟು ಸ್ವಾಮಿ ಪ್ರೀತಿಗೆ ಪಾತ್ರರಾಗುತ್ತರೆ..

**ವಾರದ ಶ್ರೇಷ್ಟ ದಿನ ಶನಿವಾರ:–**

ವಾರದ ದಿನಗಳಲ್ಲಿ ಶ್ರೀ ಗಂಡಿಲಕ್ಷ್ಮಿನರಸಿಂಹಸ್ವಾಮಿಗೆ ಸಂಬಂಧಿಸಿದಂತೆ ಶ್ರೇಷ್ಠ ದಿನವೆಂದು ಶನಿವಾರವನ್ನು ಪರಿಗಣಿಸಲಾಗಿದ್ದು, ಈ ದಿನ ಆರ್ಚಕರು ಬೆಳಿಗ್ಗೆ ಮತ್ತು ಸಾಯಂಕಾಲ ವಿಶೇಷವಾಗಿ ಹೂ – ಪತ್ರಿ ಇಡುತ್ತ ಎರಡು ಬಾರಿ ಮಡಿ ಮೈಲಿಗೆಯಿಂದ ಪೂಜಿಸುತ್ತಾರೆ. ಅಂದು ಊರಿನ ಬಹಳಷ್ಟ ಜನರು ಉಪವಾಸ ವ್ರತವನ್ನು ಮಾಡುತ್ತಾರೆ. ಊರಿನ ಎಲ್ಲಾ ಜನಾಂಗದವರು ಸ್ನಾನಮಾಡಿ ಮಡಿಯಿಂದ ಗಂಡಿನರಸಿಂಹಸ್ವಾಮಿ ದೇವಸ್ಥಾನಕ್ಕೆ ಬಂದು ತೆಂಗಿನಕಾತಿ, ದಕ್ಷಿಣ, ಹೂ – ಹಂಪಲನ್ನು ಅರ್ಪಣೆ ಮಾಡುತ್ತಾರೆ. ಹಾಗೆ ಪ್ರತಿ ಶನಿವಾರ ಭಜನೆ ಕಾರ್ಯಕ್ರಮದ ಜೊತೆಗೆ ಅನ್ನದಾಸೋಹ ಸಹ ಇರುತ್ತದೆ.

### ಲಕ್ಷ್ಮಿಗೆ ಶ್ರೇಷ್ಠ ದಿನ ಮಂಗಳವಾರ:-

ವಾರದ ದಿನಗಳಲ್ಲಿ ಶ್ರೀ ಗಂಡಿ ನರಸಿಂಹಸ್ವಾಮಿಯ ಪತ್ನಿಯಾದ ಲಕ್ಷ್ಮಿಯ ವಾರವನ್ನು ಮಂಗಳವಾರ ಶ್ರೇಷ್ಠದಿನ ಎಂದು ಜನರು ಆಚರಿಸುತ್ತಾರೆ. ಈ ದಿನ ಅರ್ಚಕರು ವಿಶೇಷವಾಗಿ ಲಕ್ಷ್ಮಿ ದೇವತೆಗೆ ಬೆಳಗ್ಗೆ ಮತ್ತು ಸಾಯಂಕಾಲ ವಿಶೇಷವಾಗಿ ಹೂ, ಪತ್ರಿ ಇಡುತ್ತ ಎರಡು ಬಾರಿ ಮಡಿ ಮೈಲಿಗೆಯಿಂದ ಪೂಜಿಸುತ್ತಾರೆ. ಅಂದು ಊರಿನ ಬಹಳಷ್ಟು ಹೆಂಗಸರು ಉಪವಾಸ, ವ್ರತವನ್ನು ಮಾಡುತ್ತಾರೆ. ಊರಿನ ಎಲ್ಲಾ ಜನಾಂಗದವರು ಸ್ನಾನ ಮಾಡಿ, ಮಡಿಯಿಂದ ಲಕ್ಷಿ ದೇವತೆಯನ್ನು ಹೂವು, ಕಾಯಿಂದ ಪೂಜಿಸುತ್ತಾರೆ.

### ಅಮವಾಸ್ಯೆ ದಿನ:-

ಪ್ರತಿ ಅಮವಾಸ್ಯೆಗೊಮ್ಮೆ ಶ್ರೀ ಗಂಡಿ ನರಸಿಂಹಸ್ವಾಮಿಗೆ ಅರ್ಚಕರು ವಿಶೇಷ ಪೂಜೆಯನ್ನು ಸಲ್ಲಿಸುತ್ತಾರೆ. ಬೆಳಗಿನ ಜಾವ ಎದ್ದು ಮಡಿಯಿಂದ ಹಳ್ಳಕ್ಕೆ ಹೋಗಿ ನೀರನ್ನು ತಂದು ಸ್ವಾಮಿಯ ಮೂರ್ತಿಯನ್ನು ತೊಳೆದು ವಿವಿಧ ರೀತಿಯ ಅಭಿಷೇಕವನ್ನು ಮಾಡುತ್ತಾರೆ. ಕಾಡು ಹೂಗಳಿಂದ ಸ್ವಾಮಿಗೆ ಪೂಜೆಯನ್ನು ಮಾಡುತ್ತಾರೆ. ಅಮವಾಸ್ಯೆ ದಿನ ಸಹ ಅನೇಕ ಊರುಗಳಿಂದ ಭಕ್ತರು ಬರುತ್ತಾರೆ. ವಿಶೇಷ ಪೂಜೆಯನ್ನು ಮಾಡಿಸುತ್ತಾರೆ.

### ಹುಣ್ಣಿಮೆಯ ದಿನ:-

ಹುಣ್ಣಿಮೆಯ ದಿನವೂ ಕೂಡ ಅಮವಾಸ್ಯೆಯ ದಿನ ನಡೆಯುವ ಎಲ್ಲಾ ಪೂಜಾದಿಗಳನ್ನು ಅರ್ಚಕರು ಮಡಿಯಿಂದ ಮಾಡುತ್ತಾರೆ. ಎಲ್ಲಾ ರೀತಿಯ ಪೂಜೆಗಳನ್ನು ಊರಿನ ಯಾವ ಜನಾಂಗದವರೇ ಆಗಲಿ ಮಾಡಿಸಬಹುದು. ಅಲ್ಲಿ ಯಾವುದೇ ತಾರ – ತಮ್ಯವಿಲ್ಲ. ಹಾಗಾಗಿ ಪ್ರತಿ ಹುಣ್ಣಿಮೆಯ ದಿನ ವಿಶೇಷ ಪೂಜೆಗಳನ್ನು ಮಾಡುತ್ತಾರೆ. ಆ ದಿನವೂ ಕೂಡ ಊರಿನ ಕೆಲ ಜನ ಉಪವಾಸ ವ್ರತವನ್ನು ಮಾಡುತ್ತಾರೆ. ಹುಣ್ಣಿಮೆಯ ದಿನ ವಿಶೇಷವಾಗಿ ಕಾಡು ಹೂವಿನ ಪೂಜೆ ಮಾಡುತ್ತಾರೆ.

**ಹಬ್ಬ – ಹರಿದಿನ:–**

ಮಾನವನ ಜೀವನವನ್ನು ರೂಪಿಸುವಲ್ಲಿ ಸಂಸ್ಕೃತಿಯನ್ನು ಪೋಷಿಸುವಲ್ಲಿ ನಾಗರೀಕತೆಯನ್ನು ಬೆಳೆಸುವಲ್ಲಿ ಸಂಪ್ರದಾಯಾಚರಣೆಗಳಿಗೆ ವಿಶೇಷ ಮಹತ್ವವಿದೆ. ಅವು ಅವನ ಬಾಳಿನ ಅವಿಭಾಜ್ಯ ಸಂಗತಿಗಳಾಗಿವೆ. ಸಮಾಜವನ್ನು ಒಂದುಗೂಡಿಸುವ ಮತ್ತು ಮುಂದಕ್ಕೊಯ್ಯುವ ಶಕ್ತಿ ಪುಂಜಗಳಾಗಿವೆ. ಅವಗಳು ನಡವಳಿಕೆಗಳ ಹಾಗೂ ವ್ಯವಹಾರಗಳ ಸಂಪ್ರದಾಯ ಬದ್ಧವಾಗಿಯೇ ಜರುಗುತ್ತವೆ. ಈ ಸಂಪ್ರದಾಯ ಮತ್ತು ನಂಬಿಕೆಗಳ ಕ್ರಿಯಾ ರೂಪಗಳೇ ಹಬ್ಬಗಳು. ಅವುಗಳ ಬೇರು ಮಡಿಗಳಲ್ಲಿ ಅಡಗಿದೆ. ನಿಸರ್ಗಾರಾಧನೆಯಲ್ಲಿ ಪಸರಿಸಿದೆ. ಅವು ಕೃತಿ ಸಂಸ್ಕೃತಿಗಳಲ್ಲಿ ಸ್ಪಷ್ಟ ರೂಪವನ್ನು ಪಡೆದು ಕಾಲಾನಂತರದಲ್ಲಿ ವಿಕಾಸಗೊಳ್ಳುತ್ತಾ ಜಟಿಲವಾದದ್ದುಂಟು. ಪ್ರತಿಯೊಂದು ಯುಗದ ಜನರು ಆಯಾ ಕಾಲದ ಅಭಿರುಚಿ, ಮನೋಧರ್ಮಗಳಿಗನುಸಾರವಾಗಿ ತಮ್ಮ – ತಮ್ಮ ಕಲ್ಪನೆಗಳಿಗನುಸಾರವಾಗಿ ಅವುಗಳ ರೂಪ ಸ್ವರೂಪಗಳಲ್ಲಿ ಮಾರ್ಪಾಡುಗಳನ್ನು ಮಾಡಿಕೊಂಡು ಬಂದದ್ದುಂಟು. ಹೊಸ – ಹೊಸ ವಿಧಿ ನಿಷೇಧಗಳನ್ನು, ಉಪಾಸನಾ ವಿಧಾನಗಳನ್ನು ಸಾರಿಸಿದ್ದುಂಟು ಅವುಗಳ ಬಹು ವರ್ಣನಾ ಸಂಕೀರ್ಣವಾಡಿಕೆಗಳಿಗೆ ಮತಸಂಘಟಕರು ಮತ್ತು ಪುರೋಹಿತರು ನಾನಾರೀತಿಗಳಲ್ಲಿ ಕಾಣಿಕೆಗಳನ್ನು ನೀಡಿದ್ದಾರೆ. ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನಗಳ ಫಲವಾಗಿ ಹಬ್ಬಗಳು ಹುಟ್ಟು ಪಡೆದವು. ಹೀಗಾಗಿ ಹಲವು ಸಂಪ್ರದಾಯಗಳ ಮೊತ್ತವೇ ಹಬ್ಬಗಳು.

ಹಬ್ಬಗಳು ಸ್ಥೂಲವಾಗಿ ನಾಲ್ಕು ಬಗೆಗಳಾಗಿ ವಿಂಗಡಿಸಬಹುದು. ಮತೀಯ, ಸಾಮಾಜಿಕ, ರಾಷ್ಟ್ರೀಯ ಮತ್ತು ವೈಯಕ್ತಿಕ ಆಯಾ ಮತದವರು ತಂತಮ್ಮ ಇಷ್ಟದೇವತೆಗಳ ಉತ್ಸವವನ್ನು ವಿದ್ಯುಕ್ತ ರೀತಿಯಲ್ಲಿ ವರ್ಷಕ್ಕೊಮ್ಮೆ ಸಾಮಾಜಿಕವಾಗಿ ಆಚರಿಸುವುದುಂಟು. ಶಿವರಾತ್ರಿ, ಕೃಷ್ಣ ಜಯಂತಿ, ಕಾಮನ ಹಬ್ಬ, ಗೌರಿ – ಗಣೇಶೋತ್ಸವ, ಮೊಹರಂ, ಕ್ರಿಸ್‌ಮಸ್, ಬುದ್ಧ ಜಯಂತಿ ಇಂತಹವು ಈ ಗುಂಪಿಗೆ ಸೇರುತ್ತವೆ. ಕೆಲವು ಮನೆತನಗಳಿಗೆ ಅಥವಾ ಒಂದು ಊರಿಗಷ್ಟೇ ಸೇರಿವ ಮೀಸಲಾದ

ಆಚರಣೆಗಳನ್ನು .ಸಾಮಾಜಿಕ ಹಬ್ಬಗಳೆಂದು ನಾಮಕರಣ ಮಾಡಬಹುದು. ಸಾಮಾಜಿಕ ಸಂಪ್ರದಾಯಗಳೇ ಅವುಗಳ ಮೂಲ. ಜಾತಿ, ಕುಲಗೋತ್ರ, ಲಿಂಗವರ್ಣ, ದ್ವೇಷ ಭೇದಗಳಿಲ್ಲದೆ ಒಂದು ರಾಷ್ಟ್ರದ ಎಲ್ಲಾ ಜನರು ಒಟ್ಟಾಗಿ ಆಚರಿಸುವ ಉತ್ಸವಗಳನ್ನು ರಾಷ್ಟ್ರೀಯ ಹಬ್ಬಗಳೆನ್ನಬಹುದು. ಒಬ್ಬ ವ್ಯಕ್ತಿಗೆ ಸಂಬಂಧಪಟ್ಟ ಹಾಗೆ ಆಚರಿಸುವ ಹಬ್ಬಗಳನ್ನು ವೈಯಕ್ತಿಕ ಹಬ್ಬಗಳೆಂದು ಕರೆಯಲಾಗಿದೆ.

ಸಾಮಾನ್ಯವಾಗಿ ಆಚರಿಸುವ ಜಾನಪದ ಸಂಗತಿಗಳ ಮತ್ತು ಸಂಪ್ರದಾಯಗಳ ಸಮ್ಮಿಶ್ರ ಜಟಿಲ ಫಲಕವೇ ಹಬ್ಬ ಎಂದು ವಿದ್ವಾಂಸರು ಹೇಳಿದ್ದಾರೆ. ಈ ಹಬ್ಬಗಳ ಸಾಮಾಜಿಕ ಪ್ರಯೋಜನಗಳನ್ನಂತು ನಿರ್ಲಕ್ಷಿಸುವಂತಿಲ್ಲ. ನೆಂಟರಿಷ್ಟರು ಒಂದು ಕಡೆ ಕೂಡುವಾಗ ಮೈತ್ರಿ ಹಿಗ್ಗುತ್ತದೆ. ಭಾವಾತ್ಮಕತೆ ಕುಸುಮಿಸುತ್ತದೆ. ವಿಚಾರ ವಿನಿಮಯ ಸುಲಭವಾಗುತ್ತದೆ. "ಬಂದುಗಳ ದರ್ಶನ ಫಲಾಪಲ ಸಂಸಾರ ತರುವಿಂಣೆ" ಎಂಬ ಸುಭಾಷಿತದಂತೆ ಬಂಧುಗಳ ನೆರವಿಯೇ ಹಬ್ಬವಾಗುತ್ತದೆ. ಒಂದು ರೀತಿಯಲ್ಲಿ ಅಂತಹ ನೆರವಿಗಳು ಗ್ರಾಮೀಣ ಜನರ ವಿಚಾರಗೋಷ್ಟಿಗಳಾಗುತ್ತವೆ. ಒಟ್ಟಿನಲ್ಲಿ ಹಬ್ಬಗಳು ಗ್ರಾಮೀಣ ಜೀವನದ ಸಾಂಸ್ಕೃತಿಕ ಪ್ರೇರಣೆಗಳೆಂದು ಜಾನಪದರ ರಸಿಕತೆಗೂ, ಕಲಾಭಿಜ್ಞತೆಗೂ ಹಿಡೆದ ಕನ್ನಡಿಗಳೆಂದು ಧಾರಾಳವಾಗಿ ಹೇಳಬಹುದು. ವರ್ಷಕ್ಕೊಮ್ಮೆ ಬರುವ ಹಬ್ಬಗಳರೆಡೂ ಜೀವನದ ರಸನಿಮಿಷಗಳು, ಬಾಳಿಗೆ ತಂಪೆರೆಯುವ ಅಮೃತ ಬಿಂದುಗಳು, ಪ್ರತಿಯೊಂದು ಹಬ್ಬವೂ ಸಂಪ್ರದಾಯವೂ ಹೌದು, ಸಂಕೀರ್ಣ ಕಲೆಯೂ ಹೌದು, ಆತ್ಮೋದ್ಧಾರ ಸಾಧನದ ಮಾಧ್ಯಮವೂ ಹೌದು. ಹೃದಯ – ಹೃದಯಗಳನ್ನೊಟ್ಟುಗೂಡಿಸುವ ಸೇತು ಶಕ್ತಿಯೂ ಹೌದು. ಈ ಹಿನ್ನೆಲೆಯಲ್ಲಿ ಸಂಡೂರು ಕ್ಷೇತ್ರದಲ್ಲಿ ಆಚರಿಸಲ್ಪಡುವ ಎಲ್ಲಾ ಹಬ್ಬ – ಹರಿದಿನಗಳಲ್ಲಿಯೂ ಶ್ರೀ ಗಂಡಿಲಕ್ಷ್ಮಿ ನರಸಿಂಹಸ್ವಾಮಿಯ ವಿಶೇಷ ಪೂಜೆಯು ನಡೆಯುತ್ತದೆ. ವರ್ಷದ ಆರಂಭದ ದಿನವಾದ ಯುಗಾದಿಯಲ್ಲಿ ಅಮವಾಸ್ಯೆಯಿಂದ ಹಿಡಿದು ಪಂಚಮಿಯವರೆಗೂ ಐದು ದಿನಗಳವರೆಗೂ ದಿನವಿಡೀ ವಿವಿಧ ರೀತಿಯ ಪೂಜೆಯನ್ನು ಅರ್ಚಕರು ಮಾಡುತ್ತಾರೆ. ಒಂದು ದಿನ ಪಂಚಾಮೃತಾಭಿಷೇಕ ಮತ್ತು ಅರ್ಚನೆ ಮತ್ತೊಂದು ದಿನ ಪತ್ರಿ, ಕಾಡು ಹೂಗಳಿಂದ ಗಂಡಿ ನರಸಿಂಹ ಸ್ವಾಮಿಯನ್ನು ಅಲಂಕರಿಸಿ ಬೆಳ್ಳಿಯ, ಬಂಗಾರದ

ಆಭರಣಗಳನ್ನು ತೊಡಿಸಿ, ರೇಷ್ಮೆಯ ವಸ್ತ್ರವನ್ನು, ನಡುವಿಗೆ, ಬಾಗಿಲಿಗೆ ಹಿತ್ತಾಳೆಯ ಪ್ರಬಾವಳಿಯನ್ನು ಇಟ್ಟು ದೀಪಾಲಂಕಾರ ಮಾಡಿ ಪೂಜಿಸುತ್ತಾರೆ. ಈ ಪ್ರಬಂದ ಅಧ್ಯಯನಕ್ಕೆ ಒಳಪಡಿಸಿದ ಎಲ್ಲಾ ಆಚರಣೆಗಳನ್ನು ಬಹಳಷ್ಟು ವಿಜ್ರಂಭಣೆಯಿಂದ ನೆರವೇರಿಸುತ್ತಾರೆ. ನಾಗರ ಪಂಚಮಿಯ ಮೂರನೇ ಶನಿವಾರ ಆಭರಣ ಪೂಜೆಯನ್ನು ಮಾಡುತ್ತಾರೆ ಅಂದರೆ ಆಭರಣಗಳನ್ನು ತೊಡಿಸಿ ವಿವಿಧ ರೀತಿಯ ಪುಷ್ಪ, ಪತ್ರಿಗಳಿಂದ ಅರ್ಚಕರು ಮಡಿಯಿಂದ ಪೂಜಿಸುತ್ತಾರೆ. ಶ್ರೀ ಗಂಡಿ ಲಿಕ್ಷ್ಮಿನರಸಿಂಹ ಸ್ವಾಮಿಯ ದೇವಸ್ಥಾನದ ಆವರಣದಲ್ಲಿಯೇ ಆಂಜನೇಯನ ದೇವಸ್ಥಾನ ಇರುವುದರಿಂದ ಪ್ರತಿ ಶನಿವಾರ ಭಕ್ತರು ಹೆಚ್ಚಾಗಿ ಬರುತ್ತಾರೆ. ಪೂಜೆಗೆ ಅಕ್ಕಿ, ಗೋಧಿ ಹಿಟ್ಟು, ಬೆಲ್ಲ, ಬೇಳೆ, ಎಲೆ – ಅಡಿಕೆ, ತೆಂಗಿನ ಕಾಯಿ, ದಕ್ಷಿಣವನ್ನು ಕೊಡುತ್ತಾರೆ.

ದಸರಾ ಹಬ್ಬದಲ್ಲಿ ಹಾಗೂ ಯುಗಾದಿ ಹಬ್ಬದ ಸಂದಭದಲ್ಲಿ ಶ್ರೀ ಗಂಡಿ ಲಕ್ಷ್ಮಿನರಸಿಂಹ ಸ್ವಾಮಿಯ ದೇವಸ್ಥಾನಕ್ಕೆ ಭಕ್ತರು ಬರುತ್ತಾರೆ. ಹಾಗೂ ಈ ಪರಿಸರವು ರಮಣೀಯತೆಯಿಂದ ಕೂಡಿರುವುದರಿಂದ ವಿಹಾರ ತಾಣವಾಗಿದೆ. ಅದ್ದರಿಂದ ಜನರು ಹೆಚ್ಚಾಗಿ ಜನರು ಬರುತ್ತಾರೆ.

ಮಹಾಶಿವರಾತ್ರಿಯ ದಿವಸ ಸಹ ಭಕ್ತರು ಉಪವಾಸವನ್ನು ಮಾಡುತ್ತಾರೆ. ಅಂದು ನರಸಿಂಹ ಸ್ವಾಮಿಗೆ ವಿವಿಧ ರೀತಿಯಲ್ಲಿ ಅರ್ಚಕರು ಅಲಂಕರಿಸುತ್ತಾರೆ. ಒಟ್ಟಾರೆ ಊರಿನಲ್ಲಿ ಯಾವುದೇ ಹಬ್ಬಗಳನ್ನು ಮಾಡಿದರೂ, ನರಸಿಂಹಸ್ವಾಮಿ ಗುಡಿಗೆ ಜನರು ಬರುತ್ತಾರೆ.

**ಕಾಮನಹಬ್ಬದಲ್ಲಿ ಆಚರಣೆ:–**

ಸಂಡೂರಿನ ನಾಡಿನಲ್ಲಿ ಆಚರಿಸುತ್ತಿರುವ ಆಚರಣೆಗಳು ಅನೇಕ ರಾಷ್ಟ್ರೀಯ ಹಬ್ಬಗಳು, ನಾಡ ಹಬ್ಬಗಳು, ಗ್ರಾಮೀಣ ಹಬ್ಬಗಳು, ಅದರಲ್ಲೂ ಗ್ರಾಮೀಣ ಹಬ್ಬಗಳಲ್ಲಿ ವಾರ್ಷಿಕಾವರ್ತನದ ಹಬ್ಬಗಳು ಹೀಗೆ ಹತ್ತು ಹಲವಾರು ಹಬ್ಬಗಳಲ್ಲೂ,

ವಿವಿಧ ರೀತಿಯ ಆಚರಣೆಗಳನ್ನು ಜನಪದರು ಆಚರಿಸುತ್ತಾ ಬಂದಿದ್ದಾರೆ. ಅವುಗಳಲ್ಲಿ ಕಾಮನ ಹಬ್ಬ ಅಥವ ಹೋಳಿ ಹುಣ್ಣಿಮೆಯ ಸಂದರ್ಭದಲ್ಲಿ ಶ್ರೀ ಗಂಡಿ ಲಕ್ಷ್ಮನರಸಿಂಹ ಸ್ವಾಮಿಗೆ ಸಂಬಂಧಿಸಿದ ಹಾಗೆ ಸಾಂಪ್ರದಾಯಿಕವಾದ ಆಚರಣೆಗಳು ಆಚರಿಸಲ್ಪಡುತ್ತವೆ.

**ಜಾತ್ರೆ:-**

ಮಾನವ ತನ್ನ ಬೆಳವಣಿಗೆ ಆರಂಭದ ದಿನಗಳಲ್ಲಿ ನಡೆಯುತ್ತಿದ್ದ ಆಚರಣೆ ಪದ್ಧತಿಗಳಿಗೆಲ್ಲ ಧಾರ್ಮಿಕ ಭಾವನೆಯೇ ಪ್ರೇರಕವಾಗಿತ್ತು ಅಥವಾ ಹಿನ್ನೆಲೆಯಾಗಿತ್ತು. ಜನತೆಯ ಬದುಕಿನ ಭಾಹ್ಯವಾಗಿ ನಡೆಯುವ ಪ್ರತಿ ಆಚರಣೆಗಳಲ್ಲಿ ಇಂತಹ ಧಾರ್ಮಿಕ ಭಾವನೆಗಳನ್ನು ಕಾಣುತ್ತೇವೆ. ಮಾನವನ ಮನಸ್ಸು ಪಕ್ವಗೊಂಡಂತೆಲ್ಲ ಧರ್ಮದ ಬಗೆಗಿನ ಭಾವನೆಗಳು ನಾನಾ ರೀತಿಯಾಗಿ ರೂಪಗೊಂಡವು. ಪ್ರಕೃತಿಯಲ್ಲಿ ಕಾಣಿಸಿಕೊಳ್ಳುವ ಮಳೆ, ಗುಡುಗು, ಸಿಡಿಲು, ಮಿಂಚು ಇವುಗಳ ಬಗೆಗೆ ತನ್ನದೇ ಆದ ನಿಲವು ತಾಳಿದ. ಇವುಗಳ ಆರ್ಭಟಗಳಲ್ಲಿ ಬೆಳಕಿನಲ್ಲಿ ಕಾಣದ ಶಕ್ತಿಯ ಕೈವಾಡವಿದೆ. ಎಂದು ಭಾವಿಸಿದ. ಅಂತಹ ಆಗೋಚರ ಶಕ್ತಿಯನ್ನು ಆರಾಧಿಸುತ್ತಾ ಬಂದ ಕಲ್ಲು, ಮರ, ಮಣ್ಣುಗಳಲೂ ದೈವತ್ವದ ಅಂಶವನ್ನು ಕಂಡುಕೊಳುತ್ತಾ ಬಂದ. ಅಂದಿನಿಂದ ಇಂದಿನವರೆಗೂ ಮನುಷ್ಯ ತಿಳಿದೋ ತಿಳಿಯದೆಯೋ ಹಲವಾರು ಆಚರಣೆಗಳನ್ನು ಮಾಡುತ್ತಲೇ ಬಂದಿದ್ದಾನೆ. ನಂಬಿಕೆಗಳು ಈ ಆಚರಣೆಗಳ ಹಿಂಬದಿಯಲ್ಲಿ ಬಲವಾದ ಕೆಲಸ ಮಾಡುತ್ತಿವೆ. ಪ್ರಪಂಚದ ಯಾವುದೇ ಭಾಗದ ಜನರ ಬದುಕನ್ನು ಪರಿಭಾವಿಸಿದರೂ ಅದರಲ್ಲೆಲ್ಲಾ ಈ ನಂಬಿಕೆಗಳು ಪ್ರಬಲ ಕಾರಣವಾಗಿರುತ್ತವೆ.

ಪ್ರತಿನಿತ್ಯವು ಪ್ರತಿವರ್ಷವೂ ನಿಸರ್ಗದ ಮಡಿಲ್ಲಿ ನಿರಂತರವಾಗಿ ಶ್ರಮವಹಿಸಿ ದುಡಿಯುವ ಜನತೆ, ಆ ಬದುಕಿನಿಂದ ಸ್ವಲ್ಪ ವಿರಾಮ ಪಡೆದು ನೆಮ್ಮದಿಯ ಉಸಿರು ಬಿಡಲು ಹಬ್ಬ, ತೇರು, ಉತ್ಸವ, ಜಾತ್ರೆ ಮೊದಲಾದ ಸಾಮೂಹಿಕ ಆಚರಣೆಗಳನ್ನು ಕಂಡುಕೊಂಡನು. ಈ ಆಚರಣೆಗಳೆಲ್ಲ ಹುಟ್ಟಿಕೊಂಡದ್ದು ಸಂತೋಷದ ಜೀವನವನ್ನು ನಡೆಸಬೇಕು ಎಂಬ ಉದ್ದೇಶದಿಂದ ಈ ವಿಧಿಗಳಲ್ಲಿ ಜಾನಪದ ಭಾಗವೇ

ಆಗಿರುವುದರಿಂದ ಇವುಗಳಲ್ಲಿ ವೈಯುಕ್ತಿಕ ಕಾಳಜಿಗಿಂತ ಸಮಷ್ಟಿಯ ಹಿತಾಶಕ್ತಿಯ ಕಡೆಗೆ ಒಲವು ಮೂಡಿತು. ಸಮಾಜದ ಹಿತಾರಕ್ಷಣೆಯೇ ಇವುಗಳ ಮುಖ್ಯ ಉದ್ದೇಶವಾಯಿತು. ಇಂತಹ ಉದ್ದೇಶವನ್ನು ಅಭಿವ್ಯಕ್ತಿಸುವ ಹಲವು ಆಚರಣೆಗಳಲ್ಲಿ ಜಾತ್ರೆಗಳು ತುಂಬಾ ಪ್ರಮುಖ ಪಾತ್ರವಹಿಸುತ್ತವೆ. ಈ ಜಾತ್ರೆಗಳು ನಮ್ಮ ನಾಡಿನಲ್ಲಿ ಜರುಗುವ ಸ್ಥಳದ ಹೆಸರಿನಿಂದ ಅಥವಾ ಅಲ್ಲಿಯ ದೈವದ ಹೆಸರಿನಿಂದ ಜನಪ್ರಿಯವಾಗಿರುವುದುಂಟು. ಜಾತ್ರೆಗಳು ಸಮಸ್ತ ಸಾಮಾಜಿಕ ಪರಂಪರೆಯ ಅಭಿವ್ಯಕ್ತಿಯಾಗಿರುವ ಜಾನಪದದ ಅನೇಕ ಅಂಶಗಳನ್ನು ಒಳಗೊಂಡಿರುವಂತವುಗಳು. ಅಂತೆಯೇ ಜಾತ್ರೆಯ ಸಮಯದಲ್ಲಿ ನಡೆಯುವ ಸಂಕೀರ್ಣ ಸ್ವರೂಪದ ಚಟುವಟಿಕೆಗಳಲ್ಲಿ ಸಾಮೂಹಿಕವಾಗಿ ನಡೆಯುವಂತವುಗಳು. ಯಾವುದೋ ಒಂದು ನಿಗಧಿಯಾದ ವೇಳೆಯಲ್ಲಿ ಜನರೆಲ್ಲ ಸೇರಿ ದೇವರನ್ನು ಆರಾಧಿಸುವುದಕ್ಕೆ ಜಾತ್ರೆ ಎಂದು ಕರೆಯುತ್ತಾ ಬಂದಿದ್ದೇವೆ. ಜನಪದ ಸಂಸ್ಕೃತಿಗಳಿಂದ ಕೂಡಿರುವಂತಹ ನಮ್ಮ ಗ್ರಾಮೀಣರ ಜಾತ್ರೆಗಳು, ಸ್ನೇಹ, ಸಹಕಾರ, ಸಂಬಂಧಗಳು ಬೆಳೆದುಕೊಂಡು ಬಂದ ಸ್ಥಳಗಳಲ್ಲಿ ಜರುಗುವ ಜಾತ್ರೆಗಳು ಸಾಮಾನ್ಯವಾಗಿ ಹಳ್ಳಿಗರ ಅಧೀನದಲ್ಲಿಯೇ ಮುಂದುವರೆಯುತ್ತಾ ಬಂದವು.

ಯಾವುದೇ ಒಂದು ಜಾತಿಗೆ ಸಂಬಂಧಿಸಿದಂತೆ ಜಾತ್ರೆ ನಡೆಯುತ್ತಿರುವಾಗಲೂ ಎಲ್ಲ ವರ್ಗದವರು ಭಾಗವಹಿಸಿ, ಅದು ತಮ್ಮ ದೈವವೇ ಎಂದು ಭಾವಿಸುವ ಜನತೆ ಗ್ರಾಮಿಣರು. ಹೀಗೆ ಆಚರಿಸುವ ಆಚರಣೆಗಳಲ್ಲಿ ಎಲ್ಲರೂ ಕಾಣಿಸಿಕೊಳ್ಳುತ್ತಾರೆ. ಇಲ್ಲಿ ಭಾವನಾತ್ಮಕ ಏಕತೆಯಿರುತ್ತದೆ. ಜಾತ್ರೆ ಎಂಬ ಪದಕ್ಕೆ ಪುಣ್ಯ ಕ್ಷೇತ್ರ ದರ್ಶನ ಮೊದಲಾದ ಧಾರ್ಮಿಕ ಉದ್ದೇಶದಿಂದ ಮಾಡುವ ಪ್ರಯಾಣ ಯಾತ್ರೆ ಎಂಬ ನಿಘಂಟುಗಳ ಅರ್ಥ ವಿವರಣೆಯಿದೆ. ಅಲ್ಲದೆ ಯಾವುದೇ ಒಂದು ದೇವತೆಯ ರಥೋತ್ಸವ ಮೊದಲಾದ ವಿಶೇಷ ಕಾರ್ತಕ್ರಮವನ್ನು ಜಾತ್ರೆಗಿರುವ ಅರ್ಥವೆಂದು ವರ್ಣಿಸಲಾಗಿದೆ. ದೇವರ ರಥೋತ್ಸವ ಮುಂತಾದ ಸಂದರ್ಭದಲ್ಲಿ ಸೇರುವ ಜನರ ಗುಂಪು, ಸಮೂಹ, ಪರಿಸೆ ಎಂಬ ಅರ್ಥಗಳನ್ನು ಹೇಳಲಾಗಿದೆ.

ಜಾತ್ರೆಗೆ ತೀರ್ಥಯಾತ್ರೆಗೆ ಪ್ರಯಾಣ ಹೊರಟ ಯಾತ್ರಾರ್ಥಿಯನ್ನು ಜಾತ್ರಿಗ ಎಂದು ಕರೆಯಲಾಗಿದೆ. (ಕ.ಸಾ.ಪ.ಕ.ಕ. ನಿಘಂಟು ಸಂಪುಟ ೩, ಪುಟ ೩೦೩೭) ಕನ್ನಡಿಗರ ಬದುಕಿನಲ್ಲಿ ಈ ಜಾತ್ರೆ ಪರಿಸೆ, ತೇರು, ಎಷ್ಟರಮಟ್ಟಿಗೆ ಹಾಸುಹೊಕ್ಕಾಗಿ ಬೆರೆತುಕೊಂಡಿವೆಯೆಂದರೆ ನಿತ್ಯದ ಜೀವನದಲ್ಲಿ ಇವುಗಳ ಸಂಬಂಧವಾದ ಗಾದೆಗಳು ಹುಟ್ಟಿ ಬೆಳೆದುಕೊಂಡು ಬಂದಿವೆ. ಕೇರಿಗೊಬ್ಬ ಹನುಮೊಪ್ಪ, ಊರಿಗೊಂದು ಜಾತ್ರೆ. ಜಾತ್ರೆಗೆ ಹೋಗೋನು ಜಾಣ. ದಿಬ್ಬಣಕ್ಕೆ ಹೋಗೋನು ಕೋಣ, ತೇರು ಎಳೀತು ದವನ ಮುಡೀತು ಹೋಳಿಗೆ ಎಲ್ಲದ ಹಬ್ಬವಿಲ್ಲ, ರಥವಿಲ್ಲದ ಜಾತ್ರೆಯಿಲ್ಲ ಹೀಗೆ ಹಬ್ಬಗಳಿಗೂ, ಜಾತ್ರೆಗಳಿಗೂ, ತೇರಿಗೂ ನಿಕಟವಾಧ ಸಂಬಂಧವಿದೆ. ಒಂದನ್ನು ಬಿಟ್ಟು, ಒಂದು ಇರಲಾರವು. ಆರ್ಯ ಅಥವಾ ವಿಶಿಷ್ಟ ದೇವತೆಗಳ ಜಾತ್ರೆಗಿಂತ ದ್ರಾವಿಡ ಹಾಗೂ ಗ್ರಾಮದೇವತೆಗಳ ಜಾತ್ರೆಗಳು ಜಾನಪದ ಅಧ್ಯಯನಕ್ಕೆ ಹೆಚ್ಚು ಗಾಸ ಒದಗಿಸುತ್ತವೆ. ಅಂತಯೇ ಶ್ರೀ ಗಂಡಿ ಲಕ್ಷ್ಮಿ ನರಸಿಂಹಸ್ವಾಮಿ ದ್ರಾವಿಡ ವರ್ಗಕ್ಕೆ ಸೇರಿದ ದೇವರಾಗಿದ್ದಾನೆ.

ಜಾತ್ರೆ ಎಂಬ ಶಬ್ದವು ಸಂಸ್ಕೃತದ ನಿಷ್ಪನ್ನವಾಗಿದೆ. ಯಾತ್ರಾದಿಂದ ಜಾತ್ರೆ ಪದ ತತ್ಸಮ – ತದ್ಭವದ ರೂಪದಲ್ಲಿ ಬಂದುದಾಗಿದೆ. ಜಾತ್ರೆ ಎಂಬುದು ವರ್ಷಕ್ಕೊಮ್ಮೆ ನಿಗಧಿಯಾದ ಇನ್ನಿತರ ಅವಧಿಗೆ ಗೊತ್ತಾದ ಸ್ಥಳದಲ್ಲಿ ಒಂದು ದಿನವೋ ಇನ್ನೂ ಹೆಚ್ಚಿನ ದಿನಗಳವರೆಗೋ ನಡೆಯುವುದು ರೂಡಿ. ಈ ಮಹೋತ್ಸವಗಳಲ್ಲಿ ಸಾಮಾನ್ಯವಾಗಿ ತೇರನ್ನು ಎಳೆಯುವುದು ಒಂದು ಮುಖ್ಯ ಭಾಗವಾಗಿರುತ್ತದೆ.

ಕರ್ನಾಟಕದ ಯಾವುದೇ ಗ್ರಾಮದಲ್ಲಿಯೇ ಅಗಲಿ, ಗ್ರಾಮದೇವತೆಗಳಿಗೆ ಹರಕೆಯ ರೂಪದಲ್ಲಿ ಬಂದ ಧಾನ್ಯಗಳಿಂದ ಅಡುಗೆ ಮಾಡಿ ಜಾತ್ರೆಯ ಸಂದರ್ಭದಲ್ಲಿ ಊರಿನ ಜನಕ್ಕೆ ಊಟಕ್ಕೆ ಬಡಿಸುವ ಪದ್ದತಿಗಳಿವೆ. ಈ ರೀತಿ ಊಟ ಬಡಿಸುವ ವ್ಯವಸ್ಥೆಗೆ ಅರವಟಿಗೆಗಳು ಎಂದು ಹೆಸರು. ಜಾತ್ರೆ ನಡೆಯುವ ಸ್ಥಳ ದೈವವನ್ನು, ಅದರ ಪ್ರತೀಕವಾಗಿರುವ ಉತ್ಸವ ಮೂರ್ತಿಯನ್ನು ತೇರಿನಲ್ಲಿಕೂಡಿಸಿ ಭಕ್ತರು ಸೇರಿ ಎಳೆಯುತ್ತಾರೆ. ಇಂತಹ ತೇರಿಗೆ – ಬಂಡಿ, ರಥ, ಕುರ್ಜು, ವಾನ್ಯೇವು ಎಂಬ

ಹೆಸರುಗಳು ಇವೆ. ಇತ್ತೀಚೆಗೆ ಆಂಗ್ಲ ಭಾಷೆಯ ಪ್ರಭಾವದಿಂದಾಗಿ ತೇರಿಗೆ – ಕಾರ್ ಸ್ಟ್ರೀಟ್ ಎಂದು ಉಲ್ಲೇಳಿಸುತ್ತಿದ್ದಾರೆ. ತೇರು ಬೀದಿ ಅಥವಾ ರಥ ಬೀದಿಗೆ ಅಂಚೆ ವಿಳಾಸದಲ್ಲಿ ಕಾರ್ ಸ್ಟ್ರೀಟ್ ಎಂದು ಬರೆಯುವುದು ಕಾಣಸಿಗುತ್ತದೆ. ಒಂದು ಅರ್ಥದಲ್ಲಿ ತೇರು ಕೂಡ ವಾಹನವೇ ಕಾರು, ಬಂಡಿ, ಮನುಷ್ಯರ ವಾಹನವಾದರೆ ಈ ತೇರು ದೇವರ ವಾಹನ ವಾಸ್ತವವಾಗಿ ಈ ಪದದ ಮೂಲ ಅಥ ಒಂದು ಬಗೆಯ ವಾಹನ ಎಂದಷ್ಟರ್ಥ ಇತ್ತು. ತೇರು, ಎಂಬುದು ಅಚ್ಚ ದ್ರಾವಿಡ ಪದ. ದ್ರಾವಿಡ ದೇವರಾದ ಶ್ರೀ ಗಂಡಿ ಲಕ್ಷೀನರಸಿಂಹಸ್ವಾಮಿ ತೇರು ಅಥವಾ ರಥೋತ್ಸವೂ ಸಂಡೂರು ಕ್ಷೇತ್ರದ ಧರ್ಮಾಪುರ ಗ್ರಾಮದ ಪಕ್ಕ ಕಾಮನ ಹಬ್ಬದ ದಿನ ಅಂದರೆ ಹೋಳಿ ಹುಣ್ಣಿಮೆ ಸಂದರ್ಭದಲ್ಲಿ ಜರುಗುತ್ತದೆ.

ಶ್ರೀ ಗಂಡಿ ಲಕ್ಷ್ಮೀನರಸಿಂಹ ಸ್ವಾಮಿಯ ಜಾತ್ರೆಯು ಐದು ದಿನಗಳವರೆಗೆ ಜರುಗುತ್ತದೆ. ಪ್ರತಿದಿನ ಒಂದೊಂದು ಧಾರ್ಮಿಕ ಕಾರ್ಯಕ್ರಮವನ್ನು ಕಾಣಬಹುದು. ಜಾತ್ರೆಯ ಧಾರ್ಮಿಕ ಕಾರ್ಯಕ್ರಮಗಳೆಂದು – ಕಲ್ಯಾಣ್ಣೋತ್ಸಹ, ಅನ್ನದಾಸೋಹ, ಅನ್ನಬಲಿ, ಬ್ಯಾಟಿಮರ ಹಾಗೂ ರಥೋತ್ಸವ ಜಾತ್ರೆಯಲ್ಲಿ ನಡೆಯುವ ಒಂದೊಂದು ಕಾರ್ಯಕ್ರಮವನ್ನು ವೈಚಾರಿಕ ನೆಲೆಯಲ್ಲಿ ನೋಡಿದಾಗ ಜನ ಸಮಾನ್ಯರಲ್ಲಿ ಆಚರಣೆ, ನಂಬಿಕೆ, ಹರಕೆಗಳು ವೈಜ್ಞಾನಿಕ ರೀತಿಯಲ್ಲಿ ಸಹ ಸತ್ಯವಾದ ಅಂಶಗಳು ನಮಗೆ ದೊರೆಯುತ್ತಿವೆ. ಶ್ರೀ ಗಂಡಿನರಸಿಂಹ ಸ್ವಾಮಿ ಜಾತ್ರೆಗೆ ಸುಮಾರು ಮುವತ್ಮೂರು ಹಳ್ಳಿಗಳಿಂದ ಭಕ್ತರು ಬರುತ್ತಾರೆ.

ಸಂಡೂರು ರಾಜರ ಕಾಲದ ಬ್ಯಾಂಡ್‌ಗಳಿಂದ ಜಾತ್ರೆಯಲ್ಲಿ ಶಬ್ದ ಲಹರಿಯನ್ನು ತೊಡಗಿಸಿಕೊಂಡು ಬಂದಿದ್ದಾರೆ. ಅಂದಿನಿಂದ ಇಂದಿನವರೆಗೆ ಅವರ ಬ್ಯಾಂಡ್‌ಗಳನ್ನು ವಂಶಸ್ತರೆ ಬಾರಿಸಿಕೊಂಡು ಬರುತ್ತಾರೆ. ಈ ಜಾತ್ರೆಯಲ್ಲಿ ಇದರದೆ ವಿಶಿಷ್ಟತೆಯಿಂದ ಕೂಡಿದೆ.

# ಜಾತ್ರೆಯಲ್ಲಿ ಜರುಗುವ ಕಾರ್ಯಕ್ರಮಗಳು

೧. ಕಲ್ಯಾಣ್ಣೋತ್ಸವ

೨. ಅನ್ನದಾಸೋಹ

೩. ಅನ್ನಬಲಿ

೪. ಬ್ಯಾಟಿಮರ

೫. ರಥೋತ್ಸವ

## ೧.ಕಲ್ಯಾಣ್ಣೋತ್ಸವ:-

ಜಾತ್ರೆಯ ಐದು ದಿನ ಮುಂಚಿತವಾಗಿ ಪಾಲ್ತಿಗೆ ಹೋಗುತ್ತಾರೆ. ಹೋಗಿ ಬಂದ ಮೇಲೆ ಜಾತ್ರೆಯ ಒಂದು ದಿನ ಮುಂಚಿತವಾಗಿ ಕಲ್ಯಾಣೋತ್ಸವ ಕಾರ್ಯಕ್ರಮವನ್ನು ಮಾಡುತ್ತಾರೆ. ಸಂಡೂರು ರಾಜನ ಅರಮನೆಯಿಂದ ಬಂಗಾರದ ಒಡವೆಗಳನ್ನು ತಂದು ನರಸಿಂಹಸ್ವಾಮಿ ಹಾಗೂ ಲಕ್ಷ್ಮೀ ದೇವತೆಗೆ ಅಲಂಕಾರಮಾಡಿ ಮಾನವರಿಗೆ ವಿವಾಹ ಮಾಡಿದಂತೆ ಶ್ರೀ ನರಸಿಂಹಸ್ವಾಮಿ ಮತ್ತು ಲಕ್ಷ್ಮೀಗೆ ಮದುವೆ ಮಾಡುತ್ತಾರೆ. ಈ ಕಾರ್ಯಕ್ರಮವನ್ನು ಘೋರ್ಪಡೆಯ ಮನೆತನದವರು ಕಲ್ಯಾಣ್ಣೋತ್ಸವವನ್ನು ಮಾಡುತ್ತಾರೆ.

ಈ ಧಾರ್ಮಿಕ ಕಾರ್ಯಕ್ರಮಕ್ಕೆ ಕಾರಣವೆಂದರೆ ಶ್ರೀ ಗಂಡಿ ನರಸಿಂಹಸ್ವಾಮಿ ಮೊದಲಿಗೆ ಮೂರ್ತಿ ಒಡಮೂಡಿದಾಗ ಅಲ್ಲಿ ಬೆಂಕಿ ಉರಿಯುತ್ತಿತ್ತು. ಒಂದುಸಲ ಪೂಜಾರಿಯ ಮಗನೆ ಕಾಣೆಯಾದನು ಇದನ್ನು ಮನಗಂಡು ಪೂಜಾರಿಯು ಇತನು ನರಸಿಂಹಸ್ವಾಮಿ ಎಂದು ತಿಳಿದು ಆತನ ಜೊತೆಗೆ ಲಕ್ಷ್ಮೀಯ ಮೂರ್ತಿಯನ್ನು ಪ್ರತಿಷ್ಠಾಪಿಸಿದರು ಆದ್ದರಿಂದ ಅಂದಿನಿಂದ ಇಂದಿನವರಿಗೂ ಜಾತ್ರೆಯಲ್ಲಿ ಈ ಕಲ್ಯಾಣ್ಣೋತ್ಸವ ಕಾರ್ಯ ಕ್ರಮವನ್ನು ಮಾಡಿಕೊಂಡು ಬರುತ್ತಾರೆ. ನರಸಿಂಹಸ್ವಾಮಿ ಮತ್ತು ಲಕ್ಷ್ಮೀಯ ಕಲ್ಯಾಣ್ಣೋತ್ಸಾವ ಒಂದು ಮದುವೆಯಂತೆ ವಿಜೃಂಭಣೆಯಿಂದ ಜರುಗುತ್ತದೆ. ಕಲ್ಯಾಣ್ಣೋತ್ಸಾವ ಮೊದಲಿಗೆ ನರಸಿಂಹಸ್ವಾಮಿ ಮತ್ತು ಲಕ್ಷ್ಮೀಯ ಮೂರ್ತಿಗಳನ್ನು ಶುಭ್ರಗೊಳಿಸಿ ಎಣ್ಣೆಯಿಂದ ಮಜ್ಜನಮಾಡಿಸಿ ಪಂಚಾಮೃತದಿಂದ

ತೊಳೆದು ಸುಗಂಧ ದ್ರವ್ಯಗಳಿಂದ ಲೇಪಿಸಿ ರೇಷ್ಮೆ ಬಟ್ಟೆಯನ್ನು ತೊಡಿಸಿ ಬಂಗಾರದ ಒಡೆವೆಗಳನ್ನು ಹಾಕಿ ಕಲ್ಯಾಣೋತ್ಸಾವನ್ನು ಮಾಡುತ್ತಾರೆ. ಅಕ್ಕಿಯಲ್ಲಿ ಅರಿಸಿನ ಪುಡಿಯನ್ನು ಕಲಸಿ ಎಲ್ಲಾ ಭಕ್ತರಿಗೆ ಕೊಡುತ್ತಾರೆ. ಗಟ್ಟಿಮೇಳದೊಂದಿಗೆ ಅಕ್ಕಿಯನ್ನು ಅಂದರೆ ಅಕ್ಷತೆಯನ್ನು ದೇವರಿಗೆ ಹಾಕುತ್ತಾರೆ. ನಂತರ ಜಾತ್ರೆಯ ಮುಂದಿನ ಕಾರ್ಯಕ್ರಮಗಳು ಜರುಗುತ್ತವೆ. ಈ ಸಂದರ್ಭದಲ್ಲಿ ಎಲ್ಲಾ ಭಕ್ತರಿಗೆ ಸಿಹಿ ಊಟದ ವ್ಯವಸ್ಥೆ ಇರುತ್ತದೆ. ಇಂತಹ ಕಾರ್ಯಕ್ರಮದ ಪಲವಾಗಿ ನಮಗೆ ತಿಳಿದುಬರುವುದೇನೆಂದರೆ. ಗಂಡಿ ನರಸಿಂಹ ಎಂದು ಕರಿಯುವ ಬದಲು ಶ್ರೀ ಗಂಡಿಲಕ್ಷ್ಮೀ ನರಸಿಂಹಸ್ವಾಮಿ ಎಂಬ ಶಾಂತಿಯ ಸಂಕೇತವಾಗಿ ಕರೆಯುತ್ತಾರೆ. ಅಂದಿನಿಂದ ಇಂದಿನ ವರಿಗೆ ಯಾವುದೆ ರೀತಿಯಲ್ಲಿ ಅಹಿತರಕರ ಘಟನೆಗಳು ನೆಡೆದಿಲ್ಲ.

### ೨. ಅನ್ನದಾಸೋಹ:-

ಸಂಡೂರು ಕೇವಲ ಗಣಿಗಾರಿಕೆಗೆ ಹೆಸರಾಗದೆ, ಜಾತ್ರೆ ಹಬ್ಬಗಳಲ್ಲಿ ಅರ್ಥಿಕವಾಗಿ ಸಹಾಯಮಾಡುವುದರಿಂದ ಜಾತ್ರೆಗಳ ಉತ್ಸವವನ್ನು ಜನರಲ್ಲಿ ಹೆಚ್ಚಿಸಿದ್ದಾರೆ. ಯಾವುದೇ ಜಾತ್ರೆ ಹಬ್ಬಗಳು ಬಂದರೆ ಸಂಡೂರಿನಲ್ಲಿ ಕೆಲ ಗಣಿಮಾಲಿಕರು ಸಹಾಯವನ್ನು ಮಾಡುತ್ತಾರೆ. ಇದರಿಂದ ಅಳಿಸಿಹೊಗುವ ಸಂಪ್ರಾದಾಯಗಳು ಜೀವಂತವಾಗಿ ಉಳಿಯಲು ಸಹಾಯ ಮಾಡಿದಂತೆಯಾಗುತ್ತದೆ. ಆದೆ ರೀತಿಯಾಗಿ ಶ್ರೀಗಂಡಿ ಲಕ್ಷ್ಮೀನರಸಿಂಹಸ್ವಾಮಿ ಜಾತ್ರೆಯ ಸಂದರ್ಭದಲ್ಲಿ ಗಣಿಮಾಲಿಕರು ಸಾರ್ವಜನಿಕರಿಗೆ ಅನ್ನದಾಸೋಹವನ್ನು ಮಾಡುತ್ತಾರೆ. ಇದರಿಂದ ನರಸಿಂಹಸ್ವಾಮಿಯ ಜಾತ್ರೆಗೆ ಆನೇಕ ದೂರದ ಊರುಗಳಿಂದ ಜನರು ಬಂದು ಭಾಗವಹಿಸುತ್ತಾರೆ.

ಶ್ರೀ ಗಂಡಿ ಲಕ್ಷ್ಮೀನರಸಿಂಹಸ್ವಾಮಿಯ ದೇವಾಲಯ ಪಕ್ಕ ಅನೇಕ ಮೈನಿಂಗ್ ಕಂಪನಿಗಳುವೆ ಆದ್ದರಿಂದ ಜಾತ್ರೆಗಳಲ್ಲಿ ದೇವಸ್ಥಾನಕ್ಕೆ ಸಹಾಯವನ್ನು ಮಾಡುತ್ತಾರೆ. ಪ್ರತಿವರ್ಷ ಈ ಹೋಳಿ ಹುಣ್ಣಿಮೆದಿನ ಜರುಗುವ ಜಾತ್ರೆ ಸುಮಾರು ಮೂರು – ನಾಲ್ಕು ದಿನಗಳವರೆಗೆ ಜರುಗುತ್ತದೆ. ಆ ಸಮಯದಲ್ಲಿ ಅನ್ನದಾಸೋಹವನ್ನು ಜಾತ್ರೆ ಮುಗಿಯುವವರೆಗೆ ಮಾಡುತ್ತಾರೆ. ವಿ.ಎಸ್.ಎಲ್. ಕಂಪನಿ, ಹೆಚ್.ಆರ್.ಜಿ.

ಕಂಪನಿ ಹಾಗೂ ರಾಜಕೀಯ ವ್ಯಕ್ತಿಗಳಿಂದ ಮತ್ತು ಭಕ್ತರಿಂದ ಅನ್ನದಾಸೋಹ ಜರುಗುತ್ತದೆ.

### ೩. ಅನ್ನ ಬಲಿ:-

ಶ್ರೀ ಗಂಡಿ ಲಕ್ಷ್ಮೀನರಸಿಂಹಸ್ವಾಮಿಯ ಜಾತ್ರೆಯಲ್ಲಿ ಅನ್ನ ಬಲಿ ಎಂಬ ಧಾರ್ಮಿಕ ಕಾರ್ಯಕ್ರಮವನ್ನು ನಾವು ಕಾಣಬಹುದು ದೇವಸ್ಥಾನದಿಂದ ಪಾದಗಟ್ಟೆಯವರೆಗೆ ಅನ್ನ ಬಲಿ ಕೊಡುತ್ತಾರೆ. ಮುಂಜಾನೆ ಮತ್ತು ಸಂಜೆಯ ಸಮಯದಲ್ಲಿ ಕೊಡುತ್ತಾರೆ. ಇದಕ್ಕೆ ಕಾರಣವೆನೆಂದರೆ ಇಲ್ಲಿ ಹೆಚ್ಚಾಗಿ ಕೋತಿಗಳು ವಾಸಮಾಡಿರುವುದರಿಂದ ಅವುಗಳಿಗೆ ಅನ್ನವನ್ನು ಹಾಕುವ ಪದ್ಧತಿಯನ್ನು ತೋರಿಸಿಕೊಡುತ್ತದೆ.

ಈ ಜಾತ್ರೆಯ ವಿಶೇಷವಾಗಿದೆ ಯಾಕೆಂದರೆ ಎಲ್ಲಾ ಜಾತ್ರೆಗಳು ಕೇವಲ ಮನುಷ್ಯರಿಗೆ ಸಂಬಂಧಪಟ್ಟದ್ದರೆ ಇಲ್ಲಿ ಪ್ರಾಣಿಗಳಿಗೆ ಗಯೆಯನ್ನು ಕಾಣಬಹುದು. ಆದ್ದರಿಂದ ಇಂತಹ ಕಾರ್ಯಕ್ರಮದಿಂದ ಸಂಡೂರು ಬೆಟ್ಟ – ಗುಡ್ಡಗಳಿಂದ ಕೂಡಿರುವುದರಿಂದ ಅಂತಹ ಪ್ರಾಣಿಗಳಿಗೆ ಮನುಷ್ಯ ದಯೆಯನ್ನು ತೊರಬೇಕು. ಎಂದು ಈ ಕಾರ್ಯಕ್ರಮದಿಂದ ತಿಳಿದು ಬರುತ್ತದೆ. ಇಂತಹ ಆಚರಣೆಯಿಂದ ಜಾತ್ರೆಗೆ ಸಾವಿರಾರು ಜನರು ಬರುತ್ತಾರೆ. ಇದ್ದನ್ನು ನೋಡಿ ಜನರು ಪ್ರಾಣಿಗಳಲ್ಲಿ ಅನುಕಂಪವನ್ನು ತೋರುವಂತೆ ಮಾಡುತ್ತದೆ.

### ೪. ಬ್ಯಾಟಿಮರ:-

ಪೂಜಾರಿಯು ಉಪವಾಸದಿಂದ ಇದ್ದು ಬ್ಯಾಟಿಮರವನ್ನು ತರುತ್ತಾರೆ. ಶ್ರೀ ಗಂಡಿಲಕ್ಷ್ಮೀಯ ನರಸಿಂಹ ಸ್ವಾಮಿಯ ಜಾತ್ರೆಯಲ್ಲಿ ಬ್ಯಾಟಿಮರ ಕಾರ್ಯಕ್ರಮವು ಒಂದಾಗಿದೆ. ಸಂಡೂರು ಕ್ಷೇತ್ರದ ಲಕ್ಷ್ಮೀಪುರ ಗ್ರಾಮದ ನಾಯಕ ಜನಾಂಗದವರಾದ ಶೀ ತಿಮ್ಮಪ್ಪನವರು ಬ್ಯಾಟಿಮರವನ್ನು ತರುತ್ತಾರೆ. ಇವರ ವಂಶಸ್ಥರೆ ಪ್ರತಿ ವರ್ಷ ಜಾತ್ರೆಯಲ್ಲಿ

ಬ್ಯಾಟಿ ಗಿಡವನ್ನು ತರಬೇಕು. ಈ ಪೂಜಾರಿಯು ಏನು ಊಟಮಾಡದೆ, ಅಂದರೆ ಬಾಳೇಹಣ್ಣು, ಹಾಲು ಸೇವಿಸಬೇಕು. ಈತನಿಂದ ತರುವಾಗ ಆತನಿಗೆ ಎಚ್ಚರ ವಿರುವುದಿಲ್ಲ ಹಾಗೂ ಪ್ರತಿವರ್ಷ ಜಾತ್ರೆಯ ಸಂದರ್ಭದಲ್ಲಿ ಅಂದರೆ ಬ್ಯಾಟಿಮರ ಕಾರ್ಯದಲ್ಲಿ ಒಬ್ಬರು ಸತ್ತು ಮತ್ತೆ ಹುಟ್ಟಿಬರುತ್ತಾರೆ. ಎಂಬ ನಂಬಿಕೆ ಇದೆ. ಈ ಆಚರಣೆ ಬಹಳ ಜಾಗ್ರತೆಯಿಂದ ಆಚರಿಸುವ ಆಚರಣೆಯಾಗಿದೆ.

**೫. ರಥೋತ್ಸವ:–**

ಶ್ರೀ ಗಂಡಿ ಲಕ್ಷ್ಮೀನರಸಿಂಹಸ್ವಾಮಿ ತೇರು ರಥೋತ್ಸವ ಎಂದೆಲ್ಲಾ ಕರೆಯಿಸಿಕೊಳ್ಳುವ ಈ ಉತ್ಸವವು ಸಂಡೂರು ಕ್ಷೇತ್ರದಲ್ಲಿ ಹೋಳಿ ಹುಣ್ಣಿಮೆ ದಿನದಂದು ಜರುಗುತ್ತದೆ. ಕರ್ನಾಟಕದ ಬಹುತೇಕ ಗ್ರಾಮಗಳಲ್ಲಿ ಮತ್ತು ಪಟ್ಟಣಗಳಲ್ಲಿಯಾಗಲಿ ಯಾವುದೇ ದೇವರ ಜಾತ್ರೆ ನೆಡೆದರೆ ಅಲ್ಲಿ ರಥೋತ್ಸವ ಕಾರ್ಯ ಕ್ರಮವಿರುತ್ತದೆ. ಆದೇ ರೀತಿಯಾಗಿ ನರಸಿಂಹಸ್ವಾಮಿ ತೇರು ಜರಗುತ್ತದೆ. ತೇರು ಎಳೆಯುವ ಮುಂಚೆ ಸಂಡೂರಿನ ಬ್ರಾಹ್ಮಣರು ಬೆಳಿಗ್ಗೆ ಏಳುಮೂಕ್ಕಾಲು ಗಂಟೆಗೆ ಬಂದು ಐದು ಹೆಜ್ಜೆ ತೇರನ್ನು ಶಾಸ್ತ್ರಕ್ಕೆ ಎಳೆಯುತ್ತಾರೆ. ಸಾಯಂಕಾಲ ಐದು ಗಂಟೆಗೆ ಸಾರ್ವಜನಿಕರ ನೇತೃತ್ವದಲ್ಲಿ ತೇರನ್ನುಯ ಎಳೆಯುತ್ತಾರೆ. ತೇರು ದೊಡ್ಡ – ದೊಡ್ಡ ಹೂವಿನ ಹಾರಗಳಿಂದ ಅಲಂಕಾರಗೊಂಡು ನೋಡುಗರಿಗೆ ಸಂತೋಷವನ್ನು ಕೊಡುತ್ತದೆ. ತೇರನ್ನು ಎಳೆಯುವಾಗ ಜನರು ಬಾಳೆ ಹಣ್ಣುಗಳನ್ನು ಉಗ್ಗುತ್ತಾರೆ.

ರಥವು ಭಾರತೀಯ ಪುರಾಣ ಪರಂಪರೆಗೆ ಸೇರಿದ ದೇವರುಗಳನ್ನು, ಪ್ರಾಣಿ – ಪಕ್ಷಿಗಳನ್ನು, ಬಿಡಿಸಿದ ಚಿಟ್ಟೆಗಳನ್ನು ತೇರಿನ ಹೊರಮೈಯಲ್ಲಿ ಕೆತ್ತಿರುತ್ತಾರೆ. ಈ ಕೆತ್ತನೆ ಕೆಲಸದ ಸೂಕ್ಷ್ಮಕಲೆ ಕೆತ್ತಿದವರ ಹಾಗೂ ಕೆತ್ತಿಸಿದವರ ಶಕ್ತಿಯನ್ನು ಅವಲಂಬಿಸಿರುತ್ತದೆ. ಬಳ್ಳಿಗಳನ್ನು ಬಿಡಿಸಿರುವುದುಂಟು, ಇದು ಕೆಳಭಾಗವಾದರೆ ಎರಡನೆಯ ಭಾಗದಲ್ಲಿ ಅಂದ ಚಂದದ ಅಂತಸ್ತುಗಳನ್ನು ಗೋಪುರಾಕಾರದಲ್ಲಿ ಇದು ವಿಜಯನಗರದ ಶೈಲಿಯ ದೇವಸ್ಥಾನಗಳ ಮುಂದಿರುವ ಎತ್ತರದ ಗೋಪುರಗಳನ್ನು ಹೋಲುತ್ತದೆ. ಅಂತೆಯೇ ರಥೋತ್ಸವ ಪದ್ಧತಿಯು ಈ ಕಾಲದಿಂದಲೇ

ಆರಂಭವಾಗಿರಬೇಕು. ಅಂತೆಯೇ ಈ ರಥದ ಭಾಗವನ್ನು ಬಿದಿರು ಬೊಂಬುಗಳಿಂದ ಕಟ್ಟಿಗೆಯ ತೇರುಗಳಿಂದ ಕಟ್ಟುತ್ತಾ ಮೇಲು ಮೇಲಕ್ಕೆ ಹೋಗುತ್ತಾ ಸುತ್ತಳತೆ ಚಿಕ್ಕದಾಗುತ್ತಾ ಬರುವಂತೆ ಕಟ್ಟುತ್ತಾರೆ. ಪುಟ್ಟ ಕೊಠಡಿಗಳಿರುವಂತೆ ಒಂದೊಂದು ಅಂತಸ್ಥಿನಲ್ಲಿ ಮೇಲೇರುವ ಕ್ರಮದಲ್ಲಿ ೩-೪ ಜನರು ಕೂಡುವಂತೆ ನಿಲ್ಲಲು ಅನುಕೂಲ ವಾಗುವಂತೆ ಭದ್ರವಾಗಿ ಭವ್ಯವಾಗಿ ಕಟ್ಟುತ್ತಾರೆ. ಅದರ ಸುತ್ತ ಸೌಂದರ್ಯ ವರ್ಧನೆಗಾಗಿ ಬಣ್ಣದ ಬಟ್ಟೆ ಮತ್ತು ಬಾವುಟಗಳನ್ನು ಕಟ್ಟುತ್ತಾರೆ. ಎಲ್ಲ ಕಾರ್ಯಚಟುವಟಿಕೆಗಳ ನಿರ್ವಹಣೆಯನ್ನು ಊರಿನ ಪ್ರತಿಯೊಂದು ಸಮುದಾಯದವರು ನಿರ್ವಹಿಸಿಕೊಂಡು ಬರುತ್ತಾರೆ. ರಥವನ್ನು ನಿರ್ಮಿಸುವ ಕೆಲಸವನ್ನು ವಿಶ್ವಕರ್ಮ ಸಮಾಜದವರು ವಹಿಸಿಕೊಂಡಿರುತ್ತಾರೆ. ನಾಯಕ ಸಮಾಜದವರು ರಥ ಕಟ್ಟುವ ಕೆಲಸದಲ್ಲಿ ಸಹಾಯಕರಾಗಿ ಭಾರವಾದ ರಥದ ವಸ್ತುಗಳನ್ನು ಹೊತ್ತೊಯ್ದು ಅವರ ಕೈಗೆ ಕೊಡುವುದರ ಜೊತೆಗೆ ರಥ ಕಟ್ಟುವ ಕೆಲಸಕ್ಕೆ ಸಹಾಯ ಮಾಡುತ್ತಾರೆ.

## ಜೀವನಾವರ್ತನದ ಆಚರಣೆಗಳು

### ಹುಟ್ಟು ಅಥವಾ ಜನನದ ಸಂದರ್ಭ:-

ಸಂಡೂರು ಅಥವಾ ಧರ್ಮಾಪುರ ಗ್ರಾಮದಲ್ಲಿ ಯಾವ ಸಮೂದಾಯದವರ ಮನೆಯಲ್ಲಿಯೇ ಆಗಲಿ ಮಗು ಹುಟ್ಟಿದರೆ ತಿಂಗಳು ತುಂಬುವುದರೊಳಗೆ ಶ್ರೀ ಗಂಡಿಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನಕ್ಕೆ ಕರೆದೊಯ್ದು ನರಸಿಂಹಸ್ವಾಮಿ ಮುಂದುಗಡೆ ಉರುಳು ಬಿಟ್ಟು, ಸ್ವಾಮಿಗೆ ಪೂಜೆ ಮಾಡಿಸಿಕೊಂಡು ಬರುವುದು ಮೊದಲಿಗೆ ಈ ವಾಡಿಕೆ ಇತ್ತು. ಈಗ ಕಡಿಮೆಯಾಗಿದೆ. ಕಾರಣ ದೇವಸ್ಥಾನದ ಸುತ್ತು ಅಧಿರಿನ ನಿಕ್ಷೇಪಗಳು ಇರುವುದರಿಂದ ದಟ್ಟವಾದ ವಾಹನಗಳು ರಸ್ತೆಯ ಮೇಲೆ ಹೊಗುತ್ತವೆ. ಕ್ರಮೇಣ ದೂಳು ಹೆಚ್ಚಾಗಿ ಜನರಿಗೆ ದಾರಿಯೇ ಕಾಣದೇ ಮೂಗಿಗೆ ಬಟ್ಟೆಯನ್ನು ಕಟ್ಟಿಕೊಂಡು ಒದ್ದಾಡುವ ಸಂದರ್ಭ ಇರುವುದರಿಂದ ಬಾಣಂತಿಯರು ಗುಡಿಗೆ ಬರುವುದಕ್ಕೆ ಅಂಜುತ್ತಾರೆ. ಕೆಲವು ಸಮುದಾಯಗಳಲ್ಲಿ

ಮನೆಯ ದೇವರು ಗಂಡಿ ಲಕ್ಷ್ಮೀನರಸಿಂಹಸ್ವಾಮಿ ಇರುವುದರಿಂದ ಅವರು ಕಡ್ಡಾಯವಾಗಿ ದೇವಸ್ಥಾನಕ್ಕೆ ಬಂದು ಹೋಗುವ ವಾಡಿಕೆಯಿದೆ.

**ನಾಮಕರಣ:–**

ಸಂಡೂರಿಂದ ಸ್ತ್ರೀಯರು ಬಾಣಂತನಕ್ಕೆಂದು ತವರು ಮನೆಗೆ ಹೋದವರು ಮಗು ಜನಿಸಿ ಮೂರು ತಿಂಗಳೊ ಅಥವಾ ಐದು ತಿಂಗಳಲ್ಲಿ ಪುನಃ ಸಂಡೂರಿನ ಮಗುವಿನ ತಂದೆ ಮನೆಯಲ್ಲಿ ನಾಮಕರಣ ಮಾಡಿಕೊಳ್ಳಲು ಬಂದಾಗ ಮೊದಲು ಬರುವುದೇ ಶ್ರೀ ಗಂಡಿ ಲಕ್ಷ್ಮೀನರಸಿಂಹ ಸ್ವಾಮಿಯ ದೇವಸ್ಥಾನಕ್ಕೆ ಹೂ, ಹಣ್ಣು, ಕಾಯಿಯನ್ನು ಕೊಟ್ಟುಹೋಗುತ್ತಾರೆ. ನಂತರ ಮನೆಗೆ ಕರೆದುಕೊಂಡುಹೋಗಿ ನಾಮಕರಣವನ್ನು ಮಾಡುತ್ತಾರೆ.

ಸಂಡೂರು ಗಣಿಗಾರಿಕೆಯಿಂದ ತುಂಬಿರುವುದರಿಂದ ಅದಿರನ್ನು ಸಾಗಾಣಿಕೆಮಾಡಲು ವಾಹನಗಳು ಅವಶ್ಯಕ ಅದ್ದರಿಂದ ಇಲ್ಲಿ ಹೆಚ್ಚಾಗಿ ಎಲ್ಲಾ ಸಮುದಾಯಗಳು ಲಾರಿಗಳನ್ನು ಹೊಂದಿದ್ದಾರೆ. ಹೊಸದಾಗಿ ಲಾರಿಗಳನ್ನು ತರುವುವಾಗ ಒಳ್ಳೆಯ ರೀತಿಯಲ್ಲಿ ನಮ್ಮ ಲಾರಿ ಅದಾಯ ಮತ್ತು ಸುರಕ್ಷತೆಯಿಂದ ಇರಲಿ ಎಂದು ಶ್ರೀ ಗಂಡಿನರಸಿಂಹಸ್ವಾಮಿ ಎಂದು ನಾಮಕರಣವನ್ನು ಮುಖ್ಯವಾದ ಪಲಕಕ್ಕೆ ಬರೆಸುತ್ತಾರೆ. ಅಂತಹ ಸಂದಭದಲ್ಲಿ ಶ್ರೀ ಗಂಡಿಲಕ್ಷ್ಮೀನರಸಿಂಹಸ್ವಾಮಿ ದೇವಾಲಯಕ್ಕೆ ಬಂದು ಲಾರಿಗೆ ಪೂಜೆಯನ್ನು ಮಾಡಿಸಿಕೊಂಡು ಹೋಗುತ್ತಾರೆ.

**ಮುದ್ರೆಹಾಕುವ ಸಂದರ್ಭ:–**

ಧರ್ಮಾಪುರ ಮತ್ತು ಸಂಡೂರು ಗ್ರಾಮದಲ್ಲಿ ನಾಯಕ ಜನಾಂಗದ ಸಮೂದಾಯದಲ್ಲಿ ಮುದ್ರೆಯಾಕಿಸುವ ಸಂಪ್ರದಾಯವೊಂದು ಪ್ರಚಲಿತದಲ್ಲಿದೆ. ಹಿಂದಕ್ಕೆ ಈ ಜನಾಂಗದ ಸ್ತ್ರೀ – ಪುರುಷರಿಗೂ ಮುದ್ರೆಯಾಕುವ ಪದ್ಧತಿಯು ಜಾರಿಯಲ್ಲಿತ್ತು.

ಆದರೆ ಈಗ ಅದು ಕೇವಲ ಪುರುಷರಿಗಷ್ಟೇ ಸೀಮಿತಗೊಂಡಿದೆ. ಮುದ್ರೆಯಾಕಿಸಿಕೊಳ್ಳುವುದೆಂದರೆ ನರಸಿಂಹ ಸ್ವಾಮಿಯಲ್ಲಿ ದಾಸನಾಗುವುದು. ಅಂದಿನಿಂದ ಆ ವ್ಯಕ್ತಿಗೆ ಅರ್ಧ ಮದುವೆಯಾದಹಾಗೆಯೆ. ಆತ ಎಲ್ಲಾ ಶುಭ ಕಾರ್ಯಗಳಲ್ಲಿ ಭಾಗಿಯಾಗಬಹುದು.

ಮುದ್ರೆಯಾಕಿಸಿಕೊಳ್ಳವವರ ಮನೆಯಿಂದ ಹೊಸ ಮೊರದಲ್ಲಿ ಉಲುಪಿಯನ್ನು ಅಂದರೆ ಅಕ್ಕಿ, ಬೆಲ್ಲ, ಬೇಳೆ, ಗೋದಿ ಹಿಟ್ಟು, ತೆಂಗಿನಕಾಯಿ, ದಕ್ಷಿಣೆಯನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಬರುತ್ತಾರೆ. ಮುದ್ರೆ ಒತ್ತುವರನ್ನು ಬೇರೆ ಊರುಗಳಿಂದ ಕರಿಸಿಕೊಳ್ಳುತ್ತಾರೆ. ಬಳ್ಳಾರಿ, ಹೊಸಪೇಟೆಯಿಂದ ಹೆಚ್ಚಾಗಿ ಮುದ್ರೆ ಒತ್ತುವವರು ಬರುತ್ತಾರೆ. ಅವರಿಗೆ ಇಂತಿಷ್ಟು ಎಂದು ದಕ್ಷಿಣವನ್ನು ಕೊಡುತ್ತಾರೆ.

ಶ್ರೀ ಗಂಡಿ ನರಸಿಂಹಸ್ವಾಮಿಯ ಅರ್ಚಕನು ಪಂಚಕಳಸವನ್ನು ಊಡಿ, ಗೋಪಾಳ, ಬೆತ್ತ, ಶಂಕು, ಜಾಗಟಿಯನ್ನು ಪೂಜೆಮಾಡಿ, ಮಡಿ – ಮೈಲಿಗೆಯಿಂದ ಮುದ್ರೆಯಾಕಿಸಿಕೊಳ್ಳಲು ಬಂದಂತಹ ವ್ಯಕ್ತಿಯನ್ನು ಮುಂದೆ ಕೂಡಿಸಿಕೊಂಡು ನರಸಿಂಹಸ್ವಾಮಿಗೆ ಪೂಜೆಮಾಡಿ, ಒಂದು ಹಿತ್ತಾಳೆಯ ತಟ್ಟೆಯೊಳಗೆ ಬೆಂಕಿಯನ್ನುಮಾಡಿ ಒಂದು ಶಂಖ, ಇನ್ನೊಂದು ಚಕ್ರದ ಹಾಗೂ ನಾಮದ ಆಕಾರದ ಬಿಲ್ಲೆಗಳನ್ನು ಕೆಂಪಾಗುವಂತೆ ಕಾಯಿಸಿ ಆ ವ್ಯಕ್ತಿಯ ಎರಡು ರಟ್ಟೆಗಳಿಗೆ ಒತ್ತುತ್ತಾನೆ. ಇದನ್ನೆ 'ಮುದ್ರಾ ಧಾರಣೆ' ಎಂದು ಕರೆಯುತ್ತಾರೆ. ದೇಹ ಶುದ್ದಿಗಾಗಿ ಮತ್ತು ಮನಸ್ಸು ಶುದ್ದಿಗಾಗಿ, ದೈವದ ಸೇವೆಗಾಗಿ ಈ ರೀತಿಯ ಮುದ್ರೆಯನ್ನು ಮತಾಚಾರ್ಯರಿಂದ ಹಾಕಿಸಿಕೊಳ್ಳುವುದು ರೂಡಿಯಾಗಿ ಬಂದಿದೆ. ಈ ರೀತಿ ಮುದ್ರಾ ಧಾರಣೆಯನ್ನು ಮಾಡಿಕೊಳ್ಳುವವರು ಪಂಚಕಳಸಕ್ಕೂ ದಕ್ಷಿಣೆಯ ಹಣವನ್ನು ಕೊಡಬೇಕು ಮುದ್ರೆಯೊತ್ತಿಸಿಕೊಂಡವರಿಗೆ ಮತಾಚಾರ್ಯರು ನೀತಿ ಭೋದನೆಯನ್ನು ಮಾಡುತ್ತಾರೆ. ಬಿಸಿಲಲ್ಲಿ ನಿಂತವರನ್ನು ನೆರಳಿಗೆ ಕರೆಯುವುದು, ಬಾಯಾರಿ ಬಂದವರಿಗೆ ನೀರು ಕೊಡುವುದು, ಹಸಿದವರಿಗೆ ಅನ್ನವನ್ನು ಇಕ್ಕುವುದು, ಊರಿನಲ್ಲಿ ಸಾವು ಸಂಭವಿಸಿದರೆ ಅಂತ್ಯಕ್ರಿಯೆಯಾಗುವರೆಗೂ ನಿರಾಹಾರಿ ತಾಗುವುದು ಮುಂತಾದ ವಿಷಯಗಳ ಕುರಿತು ಭೋದಿಸಲಾಗುತ್ತದೆ.

ಇದೆಲ್ಲದರ ಉದ್ದೇಶ ಒಬ್ಬ ವ್ಯಕ್ತಿ ಮುದ್ರೆಯಾಕಿಸಿಕೊಳ್ಳುವುದರ ಮುಖಾಂತರ ಸಮಾಜದೊಳಗೆ ಒಳ್ಳೆಯ ಕೆಲಸಗಳನ್ನು ಮಾಡುತ್ತಾ, ಸಮಾಜಸೇವೆಗಾಗಿ ಭದ್ದವಾಗುವುದೆಂದು ತೋರುತ್ತದೆ. ಮುದ್ರೆಯನ್ನು ದಾಸಪ್ಪನವರ ಕೈಯಿಂದ ಹಾಕಿಸುತ್ತಾರೆ.

**ಮದುವೆ ಸಂದರ್ಭ:–**

ಮದುವೆಗಳು ಸಮಾನ್ಯವಾಗಿ ಗಂಡಿನ ಮನೆಯಲ್ಲಿಯೇ ಮೂರು ದಿನಗಳ ಕಾಲ ನಡೆಯುವುದರಿಂದ ಮೊದಲನೆಯ ದಿನ ಹಬ್ಬದ ಊಟ (ಚಪ್ಪರದ ಶಾಸ್ತ್ರ), ಆದಿನ ಚಪ್ಪರವನ್ನು ಅಲಂಕರಿಸುತ್ತಾರೆ. ಚಪ್ಪರದ ಕಂಬವನ್ನು ತರುತ್ತಾರೆ. ಹೆಚ್ಚಾಗಿ ಹೊಂಗೆಯ ಕಟ್ಟಿಗೆಯನ್ನು ಹಾಗೂ ಅದರ ತೊಪ್ಪಲನ್ನು ಬಳಸುತ್ತಾರೆ. ಹೊಂಗೆಯ ಗಿಡವೆ ಮದುವೆಯ ಚಪ್ಪರಕ್ಕೆ ಶ್ರೇಷ್ಠ ಎಂದು ನಂಬಿದ್ದಾರೆ. ಕೆಲವರು ಬಿದಿರಿನ ಕೋಲು ತೆಂಗಿನ ಗರಿಯನ್ನು ಚಪ್ಪರಕ್ಕೆ ಬಳಸುತ್ತಾರೆ. ಕಳಸದ ಪೂಜೆಯನ್ನುಮಾಡಿ ಗಂಡಿಗೆ ಶಾಸ್ತ್ರದ ನೀರನ್ನು ನರಸಿಂಹಸ್ವಾಮಿಯ ಗುಡಿಯಲ್ಲಿ ಹಾಕಿ ಹರಿಷಣ ಹಚ್ಚಿ ಮದುಮಗಳನ್ನು ಅಲ್ಲೆಯೇ ಮಾಡಿಕೊಂಡು ಬರುವುದು ರೂಡಿ. ಅದೇದಿನ ಹೆಣ್ಣಿನ ಮನೆಯಲ್ಲಿ ಶಾಸ್ತ್ರದ ನೀರು ಹಾಕಿ, ಬಳೆ ತೊಡಿಸಿಕೊಂಡು ಸಂಜೆ ಗಂಡು ಮನೆಗೆ ದಿಬ್ಬಣ ಹೊರಡುತ್ತದೆ. ಈ ರೀತಿಯಾಗಿ ಕೆಲವು ಸಮುದಾಯಗಳಲ್ಲಿ ಮದುವೆಯನ್ನು ಮಾಡುತ್ತಾರೆ.

ಶ್ರೀಮಂತರು ಮನೆಯ ಮುಂದೆ ವಿಜ್ರಂಬಣೆಯಿಂದ ಮದುವೆ ಮಾಡುತ್ತಾರೆ. ಅದರೆ ಬಡವರಿಗೆ ಬಹಳ ಕಷ್ಟವಾಗುತ್ತದೆ. ಅಂತಹ ಸಂದರ್ಭದಲ್ಲಿ ನರಸಿಂಹಸ್ವಾಮಿ ದೇವಾಲಯವು ವರಪ್ರಸಾದವಾಗಿದೆ. ಈ ದೇವಲಾಯವು ನಿಸರ್ಗದ ಮಡಿಲಲ್ಲಿ ಇರುವುದರಿಂದ ವರ್ಷಕ್ಕೆ ಅನೇಕ ಮದುವೆಗಳು ಶ್ರೀ ಗಂಡಿಲಕ್ಷ್ಮೀನರಸಿಂಹಸ್ವಾಮಿಯ ದೇವಾಲಯದಲ್ಲಿ ಜರುಗುತ್ತವೆ. ಮದುವೆಯ ದಿಬ್ಬಣಕ್ಕೆ ಯಾವುದೆ ರೀತಿಯ ತೊಂದರೆಗಳಲ್ಲಿ ಒಳ್ಳೆಯ ಪರಿಸರ, ಯಾವುದೆ ಅಡ್ಡಿ ಆತಂಕಗಳಿಲ್ಲ.

ನೀರು, ಕಟ್ಟಿಗೆ, ವಸತಿಗೆ ಇಲ್ಲಿ ಯಾವುದೇ ರೀತಿಯಲ್ಲಿ ತೊಂದರೆ ಇಲ್ಲ. ಆದ್ದರಿಂದ ಮದುವೆಗಳಿಗೆ ಹೆಚ್ಚು ಅನುಕೂಲಕರವಾದ ಜಾಗವಾಗಿದೆ. ಅಧುನಿಕಯುಗದಲ್ಲಿ ಶ್ರೀ ಗಂಡಿನರಸಿಂಹಸ್ವಾಮಿ ದೇವಾಲಯ ಇರುವುದರಿಂದ ಅನೇಕ ಮದುವೆಗಳು ಜರುಗುವುದರಿಂದ ಅರ್ಥಿಕವಾಗಿ ಉಳಿಯುವುದರಿಂದ ಅಡಂಬರದ ಮದುವೆಗಳಿಗೆ ಕಡಿಮಾಣ ಹಾಕಿದಂತೆಯಾಗಿದೆ. ಶ್ರೀ ಗಂಡಿಲಕ್ಷೀನರಸಿಂಹಸ್ವಾಮಿಯ ದೇವಾಲಯದ ಪಕ್ಕದಲ್ಲಿ ಕಲ್ಯಾಣ ಮಂಟಪ ಹಾಗೂ ವಸತಿ ಗೃಹಗಳು ಅಂದರೆ ಚಟ್ಟಗಳು ಇರುವುದರಿಂದ ಬಂಧು – ಬಳಗ ಮಲಗುವುದಕ್ಕೆ, ವಿಶ್ರಾಂತಿ ತೆಗೆದುಕೊಳ್ಳಲಿಕ್ಕೆ ಹೆಚ್ಚು ಅನುಕೂಲವಾಗಿದೆ.

ಶ್ರೀ ಗಂಡಿನರಸಿಂಹಸ್ವಾಮಿಯ ದೇವಾಲಯ ಎರಡು ದೊಡ್ಡ ಬೆಟ್ಟಗಳ ಸಂದಿನಲ್ಲಿ ಇರುವುದರಿಂದ ನೋಡಲು ಬಹು ಸೊಗಸಾಗಿದೆ. ಈ ದೇವಸ್ಥಾನದ ಮೇಲ್ಭಾಗದಿಂದ ನಿಂತು ನೊಡಿದರೆ ಇಡಿ ಸಂಡೂರಿನ ಸೌಂದರ್ಯ ಕಂಪನ್ನು ಸವಿಯಬಹುದು. ಈ ಸ್ಥಳದಿಂದಲೇ ವಿದೇಶಿ ಪ್ರವಾಸಿಗ ಸಂಡೂರನ್ನು ನೋಡಿ **"ಸೆಪ್ಟಂಬರ್ ತಿಂಗಳಲ್ಲಿ"** ಎಂದು ಹೇಳಿದ್ದಾನೆ. ಆದ್ದರಿಂದ ಅದನ್ನು ವಿಕ್ಷಣೆಯ ಸ್ಥಳವಾಗಿಮಾಡಿ ಸುತ್ತಗೊಡೆಯನ್ನು ನಿರ್ಮಿಸಿ ಅದರ ಮೇಲೆ **"**Sandur see in September**"** ಎಂದು ಬರೆಯಲಾಗಿದೆ. ಆದ್ದರಿಂದ ಈ ದೇವಾಲಯವು ಪ್ರೇಕ್ಷಣಿಯ ಸ್ಥಳವಾಗಿದೆ. ನವ ದಂಪತಿಗಳಿಗೆ ವಿಹಾರ ತಾಣವಾಗಿದೆ. ನೋಡುಗರಿಗೆ ಕಣ್ಣಿಗೆ ಹಬ್ಬದ ಊಟವನ್ನು ಬೆಟ್ಟ – ಗುಡ್ಡಗಳು ಉಣಬಡಿಸುತ್ತವೆ.

**೨. ನಂಬಿಕೆ:–**

ನಂಬಿಕೆ ಎಂಬುದು ನಾಮಪದವಾಗಿದೆ. 'ನಂಬು' ಎನ್ನುವ ಧಾತುವಿಗೆ **'ಇಕೆ'** ಎಂಬ ಪ್ರತ್ಯಯ ಸೇರಿ ಈ ಪದ ಉಂಟಾಗಿದೆ. ಒಂದು ವಸ್ತುವಿನ ಅಥವಾ ವಿಷಯದ ಮೇಲೆ ವಿಶ್ವಾಸವಿಟ್ಟು ಆ ಬಗೆಗೆ ಹೇಳುವ ಮಾತನ್ನು ನಂಬಿಕೆ ಎನ್ನಬಹುದು. ಸತ್ಯ ಸಂಗತಿಯಾಗಿರುವ ವಾಸ್ತವಿಕತೆಯು ನಂಬಿಕೆ ಎನಿಸುವುದಿಲ್ಲ ಎಂಬ ಮಾತುಗಳಲ್ಲಿ ನಂಬಿಕೆಯ ಬಗೆಗಿನ ಸಂಪೂರ್ಣ ವಿವರ ಸೇರಿಕೊಂಡಿದೆ. ಈ ನಂಬಿಕೆ ಬಗ್ಗೆ

ಪುರುಷೋತ್ತಮ ಬಿಳಿಮನೆಯವರು ವ್ಯಕ್ತಿ ಮತ್ತು ಸಮಾಜವು ಪರಂಪರಾಗತವಾಗಿ ಒಪ್ಪಿಕೊಂಡು ಅನುಸರಿಸುತ್ತಾ ಬರುತ್ತಿರುವ ವರ್ತನೆಗಳನ್ನು ನಾವು ನಂಬಿಕೆಗಳೆಂದು ಕರೆಯುತ್ತೇವೆ. ವೈಜ್ಞಾನಿಕ ದೃಷ್ಟಿಗಿಂತ ಭಾವುಕ ದೃಷ್ಟಿ ಇಲ್ಲಿ ಹೆಚ್ಚು ಇರುವಲ್ಲಿ ನಂಬಿಕೆಗಳು ಪ್ರಭಲವಾಗಿರುತ್ತವೆ. ಒಟ್ಟಾರೆ ಈ ನಂಬಿಕೆಯು ವ್ಯಕ್ತಿಯ ಮನಸ್ಸಿನ ಸ್ಥಿತಿಗೆ ಸಂಬಂಧಿಸಿದ್ದಾಗಿದೆ.

ಜನಪದ ನಂಬಿಕೆಯು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪುನರಾವರ್ತನೆ ಹಾಗೂ ಸಮೂಹಿಕ ನಿರೀಕ್ಷೆಗಳು ಮುಖ್ಯವಾಗಿರುತ್ತವೆ. ನಂಬಿಕೆಯು ಜನಪದರ ಜೀವನಾನುಭವದ ಉತ್ಪನ್ನವಾಗಿದೆ. ಹೀಗೆ ಮಾನವ ಬದುಕಿಗೂ, ನಂಬಿಕೆಗೂ ಬಿಡಿಸಲಾಗದ ಸಂಬಧವಿದೆ. ಮೂಲತಃ ಕಾಲ್ಪನಿಕ ಆಲೋಚನೆಯೊಂದು ವೈಯುಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ಸಮೂಹದಲ್ಲಿ ಸಾಮೂಹಿಕ ಮಾನ್ಯತೆಯನ್ನು ಪಡೆದುಕೊಂಡಾಗ ಅದು ನಂಬಿಕೆಯಾಗುತ್ತದೆ. ಶುಭಕಾರ್ಯಕ್ಕೆ ಹೋಗುವ ಸಂಧರ್ಭದಲ್ಲಿ ಬೆಕ್ಕು ಅಡ್ಡ ಬಂದರೆ ಅಪಶಕುನ ಎನ್ನುತ್ತಾರೆ. ಆಷಾಡದಲ್ಲಿ ಅತ್ತೆ – ಸೊಸೆಯಂದಿರು ಒಂದೇ ಬಾಗಿಲಲ್ಲಿ ನಡೆದಾಡಬಾರದು. ಜೋಕುಮಾರ ಹುಣ್ಣಿಮೆಯ ಸಂದರ್ಭ ಅಂದರೆ ಅಳಲುನಲ್ಲಿ ಹೊಸ ಸೊಸೆ ಗಂಡನ ಮನಿಯಲ್ಲಿ ಇರಬಾರದು, ಸಂಜೆ ಹೊತ್ತಲ್ಲಿ ಕಸಗುಡಿಸಿ ಹೊರ ಹಾಕಿದರೆ ಲಕ್ಷ್ಮೀ ಹೊರ ಹೋಗುತ್ತಾಳೆ, ತೆಂಗಿನ ಕಾಯಿಯನ್ನು ತುಳಿಯಬಾರದು ಇಂತಹ ಹಲವಾರು ನಂಬಿಕೆಗಳು ಜನಪದ ನಡುವೆ ಪ್ರಚಲಿತದಲ್ಲಿರುತ್ತವೆ. ಹಾಗೆಯೇ ಶ್ರೀ ಗಂಡಿ ಲಕ್ಷ್ಮೀನರಸಿಂಹಸ್ವಾಮಿಗೆ ಸಂಬಂಧಿಸಿದಂತೆ ಈ ರೀತಿಯ ನಂಬಿಕೆಗಳು ಆ ಜನಪದರಲ್ಲಿ ಮನೆ ಮಾಡಿಕೊಂಡಿವೆ. ದೇವಲಾಯ ಹಿಂದೆ ಸಣ್ಣಕಲ್ಲುಗಳಿಂದ ಮನೆಯನ್ನು ಕಟ್ಟುತ್ತಾರೆ. ಈ ರೀತಿ ಮನೆ ಕಟ್ಟುವುದರಿಂದ ಭಕ್ತಾದಿಗಳ ಮನದಲ್ಲಿನ ಸಮಸ್ಯೆ ಬಗೆಹರಿಯುತ್ತದೆ. ಮದುವೆಯಾಗದಿರುವರು ಮನೆಕಟ್ಟಿದರೆ ಮದುವೆಯಾಗುತ್ತದೆ. ಮಕ್ಕಳಾಗದ್ದಿದ್ದರೆ ಕಲ್ಲುಗಳಿಂದ ಗುಡಿಯ ಹಿಂದೆ ಅಥವಾ ಪಕ್ಕ ಮನೆಕಟ್ಟಿದರೆ ಬೇಗ ಮಕ್ಕಳ ಪಲವನ್ನು ನರಸಿಂಹಸ್ವಾಮಿ ಕೊಡುತ್ತಾನೆ ಎಂಬ ನಂಬಿಕೆಯು ಜನರಲ್ಲಿ ಇದೆ.

ಶ್ರೀ ಗಂಡಿ ನರಸಿಂಹಸ್ವಾಮಿಯ ವಾರದ ಪ್ರಮುಖ ದಿನ ಶನಿವಾರವಾಗಿದೆ. ಹೆಚ್ಚಾಗಿ ಸ್ತ್ರೀಯರು ದೇವಾಲಯಕ್ಕೆ ಶನಿವಾರ ಬರುತ್ತಾರೆ. ಮುಖ್ಯವಾಗಿ ಐದು ಶನಿವಾರ ದೇವಸ್ಥಾನಕ್ಕೆ ಬಂದರೆ ನಮ್ಮ ಮನಸಿನ ಇಚ್ಛೆಯನ್ನು ಬಗೆಹರಿಸುತ್ತಾನೆ ಎಂಬ ನಂಬಿಕೆ ಇದೆ. ನರಸಿಂಹಸ್ವಾಮಿಯು ಸಸ್ಯಹಾರಿಯು ಆಗಿದ್ದರಿಂದ ಪೂಜೆಗೆ ಒಣರವೆ, ಅಕ್ಕಿ, ಎಡೆಯನ್ನು ಬೆಲ್ಲದಿಂದ ಮಾಡುತ್ತಾರೆ. ಒಂದು ವೇಳೆ ಮಾಂಸವನ್ನು ದೇವಾಲಯದ ಆವರಣದಲ್ಲಿ ಮಾಡಿದರೆ ಕಂಡಿತವಾಗಿ ಅವರಿಗೆ ಒಳ್ಳೆಯದು ಅಗುವುದಿಲ್ಲ ಆದ್ದರಿಂದ ಜನರು ಅಲ್ಲಿಗೆ ಮಾಂಸವನ್ನು ತೆಗೆದುಕೊಂಡು ಹೊಗುವುದು ನಿಷೇದವಿದೆ.

ಊರಿಗೆ ರೋಗರುಜಿನಗಳು ಅಥವಾ ಮಳೆ ಬರದಿದ್ದಾಗ ಧರ್ಮಪುರ ಗ್ರಾಮದ ಜನ ನರಸಿಂಹಸ್ವಾಮಿಗೆ ಪರವು ವನ್ನು ಮಾಡುತ್ತಾರೆ. ಊರಿನ ಎಲ್ಲ ಜನರು ಕುಟುಂಬಸಮೇತ ಬಂದು ಗುಡಿಯ ಹತ್ತಿರ ಅನ್ನವನ್ನು ಮಾಡಿ, ಅನ್ನದಾಸೋಹ ಮಾಡುತ್ತಾರೆ. ಈ ರೀತಿ ಅನ್ನವನ್ನು ಅಂಚುವುದರಿಂದ ಜನರಿಗೆ, ಊರಿಗೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ. ಕೆಲವು ಜನಾಂಗದಲ್ಲಿ ಹೊಸದಾಗಿ ಮದುವೆ ಹಾಗುವ ಸಂದರ್ಭದಲ್ಲಿ ಮದುವೆಯ ಹುಡುಗ ನರಸಿಂಹಸ್ವಾಮಿಯ ಗುಡಿಗೆ ಹೋಗಿ ನೀರು ಅಂದರೆ ತೀರ್ಥ ಹಾಕಿಸಿಕೊಂಡು, ಅಲ್ಲೆ ಮದ್ಲಿಂಗ ಆಗಿ ಮನೆಗೆ ಬರಬೇಕು ಎಂಬ ನಂಬಿಕೆ. ನಾಯಕ ಜನಾಂಗದಲ್ಲಿ ಹೆಚ್ಚಾಗಿ ಈ ತರಹದ ನಂಬಿಕೆ ಕಾಣಬಹುದು.

**೩. ಹರಕೆಗಳು:-**



ಹರಕೆಗಳನ್ನು ದೇವರಿಗೆ ತೀರಿಸುವುದರಿಂದ ನಮಗೆ ಬಂದ ಕಷ್ಟ ದೂರವಾಗುತ್ತದೆ, ರೋಗ ರುಜಿನಗಳು ದೂರವಾಗುತ್ತವೆ ಎನ್ನುವ ನಂಬಿಕೆಯು ಎದೆ. ಶ್ರೀ ಗಂಡಿನರಸಿಂಹಸ್ವಾಮಿಯ ತೀರ್ಥವನ್ನು ಕುಡಿಯುವುದರಿಂದ ಉದರ ಕಾಯಿಲೆ ವಾಸಿಯಾಗುತ್ತದೆ. ಮತ್ತು ಆದಾರ(ಭಸ್ಮ) ವನ್ನು ತಿನ್ನುವುದರಿಂದ ಮತ್ತು ಚರ್ಮಕ್ಕೆ ಸವರಿಕೊಳ್ಳುವುದರಿಂದ ಚರ್ಮರೋಗ ನಿವಾರಣೆಯಾಗುತ್ತದೆ. ಎನ್ನುವುದು ಸಂಡೂರಿನ ಜನತೆಯಲ್ಲಿನ ನಂಬಿಕೆ. ಹರಕೆಗಳನ್ನು ತೀರಿಸುವುದಕ್ಕೆ ಬಹಳ ದೂರದ ಊರುಗಳಿಂದ

ಭಕ್ತಾದಿಗಳು ಬರುತ್ತಾರೆ. ಎಂದು ಸ್ಥಳೀಯರು ಹೇಳುತ್ತಾರೆ. ಬೆಳಗಾವಿ, ದಾರವಾಡ, ಬಳ್ಳಾರಿ, ಕೊಪ್ಪಳ ಅನೇಕ ಊರುಗಳಿಂದ ಕಾಲು ನಡಿಗೆಯಲ್ಲಿ ಭಕ್ತಾದಿಗಳು ಹರಕೆಗಳನ್ನು ತರುತ್ತಾರೆ. ಅದ್ದರಿಂದ ಭಕ್ತರು ಸುಖ – ಶಾಂತಿಯನ್ನು ಕೊಡು ತಂದೆ ಎಂದು ದೇವರಲ್ಲಿ ಕೇಳಿಕೊಳ್ಳುತ್ತಾರೆ.

ಜಾತ್ರೆಯ ಸಂದರ್ಭದಲ್ಲಿ ಭಕ್ತರು ತಮ್ಮ ಹರಕೆಗಳನ್ನು ಕೊಡುತ್ತಾರೆ. ಸಂಡೂರು ಗಣಿಯ ಕಣಜವಾಗಿರುವುದರಿಂದ ಗಣಿಮಾಲಿಕರು ಜಾತ್ರೆಯ ಸಂದರ್ಭದಲ್ಲಿ ಅರ್ಥಿಕವಾಗಿ ಸಹಾಯವನ್ನು ಮಾಡುತ್ತಾರೆ. ಜಾತ್ರೆಗೆ ಬಂದ ಭಕ್ತರಿಗೆ ಅನ್ನದಾಸೋಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಹೆಚ್.ಆರ್.ಜಿ. ಮೈನಿಂಗ್ ಕಂಪನಿ, ವಿ.ಎಸ್.ಎಲ್. ಕಂಪನಿ ಹಾಗೂ ರಾಜಕೀಯ ವ್ಯಕ್ತಿಗಳು ಹರಕೆಯನ್ನು ಕೊಡುತ್ತಾರೆ.

ಜಾತ್ರೆಯು ಹೋಳಿಯ ಹುಣ್ಣಿಮೆ ಸಂದರ್ಭದಲ್ಲಿ ಜರುಗುತ್ತದೆ.ಆ ಸಮಯದಲ್ಲಿ ಲಾರಿ ಮಾಲೀಕರು ದೊಡ್ಡ – ದೊಡ್ಡ ಹೂವಿನ ಹಾರವನ್ನು ಭಕ್ತರು ತಂದು ಹಾಕುತ್ತಾರೆ. ತೇರನ್ನು ಹೂಗಳಿಂದ ಅಲಂಕಾರದಿಂದ ತುಂಬಿರುತ್ತದೆ. ಆದ್ದರಿಂದ ಕೆಲವರು ತಮ್ಮ ಹರಕೆಗಳನ್ನು ಹೂವಿನ ಹಾರದ ಮೂಲಕ ಕೊಡುತ್ತಾರೆ.

**೪. ಹಾಡುಗಳು:–**

ಮನುಷ್ಯನು ಎಂದಿನಿಂದ ಆಚರಣೆಗಳನ್ನು ಮಾಡುತ್ತಾ ಬಂದನೋ ಅಂದಿನಿಂದಲೇ ಅವುಗಳಿಗೆ ಸಂವಾದಿಯಾಗಿ ಹಾಡುಗಳನ್ನು ಹಾಡುತ್ತಲೇ ಬಂದಿದ್ದಾನೆ. ಹಾಗೆಯೇ ಜಾನಪದ ಗೀತೆಯು ಯಾವುದನ್ನೆ ವಿವರಿಸಲಿ ಅದನ್ನು ನೇರವಾಗಿ ಹೇಳುತ್ತದೆ. ಅದನ್ನು ಪ್ರಯತ್ನ ಪೂರ್ವಕವಾಗಿ ಕಲಾತ್ಮಕಗೊಳಿಸುವ ಅಥವಾ ಕಾವ್ಯದ ಪರಿಣಾಮಗಳನ್ನು ತೆರೆಯಬೇಕು ಎಂಬ ಉದ್ದೇಶವು ಆತನಿಗೆ ಇರಲಿಲ್ಲ. ಇಲ್ಲಿ ಸಾಹಿತ್ಯ ಮೌಲ್ಯಕಿಂತ ಹೆಚ್ಚಾಗಿ ಸಾಮಾಜಿಕ ಚಾರಿತ್ರಿಕ ಹಾಗೂ ಮನ ಶಾಸ್ತ್ರೀಯ ಮೌಲ್ಯಗಳು

ನಮ್ಮ ಗಮನವನ್ನು ಸೆಳೆಯುತ್ತವೆ. ಇದರಿಂದ ಜನಪದದ ಮನೋಭಾವನೆಗಳನ್ನು ನಿರ್ಧರಿಸಲು ಸಾಧ್ಯವಾಗುತ್ತದೆ.

ಜಾನಪದ ಗೀತೆಯು ಯಾವುದೇ ಸದಸ್ಯರು ಹಾಡಬಹುದಾದ ಒಂದು ಕಲೆ, ಜನಪದ ಸಮೂದಾಯದಲ್ಲಿ ಪ್ರತಿಯೊಬ್ಬರೂ ಹಾಡುಗಳನ್ನು ಹಾಡಬಲ್ಲರು. ಯಾವುದೇ ಸಂದರ್ಭವನ್ನು ನೋಡಿದಾಗಲು ಸುಖ, ದುಃಖ, ಉಲ್ಲಾಸ, ನೆಮ್ಮದಿ ಎಂತಹ ಸಮಯದಲ್ಲಿಯೂ ಅಂದರೆ ಕುಟ್ಟುವಾಗ, ಬೀಸುವಾಗ, ಹೊಲದಲ್ಲಿ ಕಳೆ ತೆಗೆಯುವಾಗ, ಒಕ್ಕಲು ಮಾಡುವಾಗ, ಧಾರ್ಮಿಕ ಆಚರಣೆಯ ಸಂದರ್ಭದಲ್ಲಿ ಯಾವಾಗಲಾದರೂ ಹಾಡನ್ನು ಕಟ್ಟುವುದು ನಮ್ಮ ಜನಪದರಿಗೆ ಗೊತ್ತಿದೆ. ಜನಪದರು ನಿರಕ್ಷರರಾಗಿದ್ದರೂ ಕೂಡ ಅವರಲ್ಲಿ ಪ್ರತಿಭೆಯು ಉದಯಿಸಿದರೆ ಕಲಿತವರನ್ನು ಕೂಡ ನಾಚಿಸುವ ಕೃತಿಗಳು ಅವರಿಂದ ಹೊರಬರುತ್ತವೆಂಬ ಮಾತು ನಮ್ಮ ಶಿಕ್ಷಿತರಿಗೆ ಮನವರಿಕೆಯಾಗುವುದಕ್ಕೆ ಈ ಜಾನಪದ ಹಾಡುಗಳು ಸಾಕ್ಷಿ. ಆದ್ದರಿಂದ ಕವಿಗಳಾಗುವವರು, ಆಗಲು ಬಯಸುವವರು ಪ್ರತಿಭೆಯನ್ನು ಪಡೆದುಕೊಳ್ಳದೆ, ಗತ್ಯಂತರವಿಲ್ಲ ಎಂಬುದನ್ನು ಅರಿತು ಕೊಳ್ಳುವುದಕ್ಕೆ ಇವು ಸಾಧನಗಳಾಗಿವೆ. ಅಲ್ಲದೆ, ವಿದ್ಯಾವಂತರಿಗಿಲೂ ಕೂಡ ರಸೋನ್ಮೆಷಕ್ಕೆ ಬಂದು ಮುಟ್ಟಿರುವಾಗ ತಾವೇಕೆ ಆ ಸೆಲೆಗೆ ಮುಟ್ಟಬಾರದೆಂಬ ಆಸೆ, ಭರವಸೆಗಳು ಹೊಸಬರಲ್ಲಿ ಚಿಮ್ಮುವುದಕ್ಕೆ ಇವು ಸಹಾಯಕಾರಿಯಾಗಿವೆ. ಅಂತೆಯೇ ಸಂಡೂರಲ್ಲಿ ಜನಪದ ಕಲಾವಿದರು ನರಸಿಂಹಸ್ವಾಮಿಯ ಮೇಲೆ ಕೆಲವು ಭಕ್ತಿ ಗೀತೆಗಳನ್ನು ಕಾಣಬಹುದು,

## ಹಾಡು ಒಂದು

ಹೇ ಜಗದೀಶ ಪಾವನಾಯ
ಸೌಭಾಗ್ಯ ವರದಾಯಕ
ಕೇಶಾಯ ಸ್ವಾಮಿ, ಗುಣಾತ್ಮಕದೇವ
ಸರ್ವಾಯಾ ನರಸಿಂಹಸ್ವಾಮಿ ಪ್ರಭುವೆ
॥ಪ॥

ಬಹುರೂಪ ಸ್ವಾಮಿಯೆ ದೇವ
ಲೋಕಗುರುವೆ
ಸರ್ವೇಶ್ವರಯಾ ಸನಾತನಾಯ
ಕೃಪ ವಿದೇಯಾ ದಾಮೊದರಯಾ
ಅಪರೂಪರಾಯಾ ಬಹುನರಸಿಂಹಯಾ
ನಾರಯಣ ನರಸಿಂಹಸ್ವಾಮಿ
॥ಪ॥

ಕಾಲಜ್ಞಾನಿ ರುದ್ರಸ್ವಾಮಿಯಾ
ಬ್ರಹ್ಮಶಿರಣೆ ಅನಂತಯಾ
ವೈಕುಂಟರಾಯ, ದುಷ್ಟಾತಾಂತರಾಯ
ಲೋಕೇಶಯಾಚರ್ತುಭುಜಯ
ನಾರಯಣ, ನರಸಿಂಹಸ್ವಾಮಿ
॥ಪ॥

## ಹಾಡು ಎರಡು

ಓರಿ ಸ್ವಾಮಿ, ಉಗ್ರರೂಪ,
ವರದಾಯಕ, ವಾಸುದೇವಯಾ
ವಜ್ರಯಾ, ಪ್ರಲ್ಸಾಯಾ, ಅದಿದೇವ
ಶ್ರೀ ಲಕ್ಷ್ಮೀನರಸಿಂಹ ನಮೋಃ ನಮಃ

॥ಪ॥

ಹೇ ಪರಾಮಾತ್ಮ, ಪುರಾಣ ಪುರುಷ
ಸರ್ವೇಶ್ವರ ಸರ್ವಜ್ಞಾನಿ
ಸ್ವಾಮಿ ನರಸಿಂಹ ದೇವ

॥ಪ॥

ಲಕ್ಷ್ಮೀ ನರಸಿಂಹ
ಲಕ್ಷ್ಮೀ ನರಸಿಂಹ
ಲಕ್ಷ್ಮೀ ನರಸಿಂಹ

॥ಪ॥

ನಿತ್ಯಾಯಾ ಸಂಧ್ಯಾಯಾ
ಪುಣ್ಯಯಾ ಪ್ರಸನ್ನಾಯಾ
ಹೇರಾಯ ಮಹಾರೂಪಾಯಾ
ಪಾವನಯಾ ರಾಜಯಾ

॥ಪ॥

ಲಕ್ಷ್ಮೀ ನರಸಿಂಹ ಸ್ವಾಮಿ
ಸೂತ್ರಯಾ ಕಾರ್ಯಯಾ
ನೀಲಯಾ, ಶ್ರೀನಿವಾಸಯಾ
ಭೂತಯಾ ಭೂತಪಾಲಯಾ
ಪ್ರಜ್ವಲಾಯ ನರಸಿಂಹದೇವ

# ಅಧ್ಯಾಯ- ೫.

## ಶ್ರೀ ಗಂಡಿ ನರಸಿಂಹಸ್ವಾಮಿ ಮತ್ತು ಇತರೆ ದೈವಗಳು.

## ಅಧ್ಯಾಯ– ೫.
## ಶ್ರೀ ಗಂಡಿ ನರಸಿಂಹಸ್ವಾಮಿ ಮತ್ತು ಇತರೆ ದೈವಗಳು.

### ೧. ಲಕ್ಷ್ಮಿದೇವತೆ:–

ಶ್ರೀ ಗಂಡಿ ನರಸಿಂಹಸ್ವಾಮಿ ಹಾಗೂ ಲಕ್ಷ್ಮೀ ದೇವತೆಗೆ ವೈವಾಹಿಕ ಸಂಬಂದವನ್ನು ಜನರು ಕಟ್ಟಿಸುತ್ತಾರೆ. ಏಕೆಂದರೆ, ಮೊದಲಿಗೆ ನರಸಿಂಹಸ್ವಾಮಿ ಮೂರ್ತಿ ಗುಹೆಯಲ್ಲಿ ಒಡ ಮೂಡಿದಾಗ ಅಲ್ಲಿ ಬೆಂಕಿ ಉರಿಯುತ್ತಿತ್ತು. ಆ ಸ್ಥಳದಲ್ಲಿ ಉಗ್ರರೂಪ ವಾತವರಣವಿತ್ತು. ಇದರಿಂದ ಶಾಸ್ತ್ರ ಪಂಡಿತರು ನರಸಿಂಹಸ್ವಾಮಿಯ ಪಕ್ಕದಲ್ಲಿ ಲಕ್ಷ್ಮೀದೇವತೆ ಮೂರ್ತಿಯನ್ನು ಪೂಜಿಸಿದರು. ಅಂದಿನಿಂದ ಇಂದಿನವರೆಗೆ ಶಾಂತ ರೀತಿಯಲ್ಲಿ ಕಾಣಬಹುದು. ಆದ್ದರಿಂದ ಶಾಂತಿಗಾಗಿ ಲಕ್ಷ್ಮೀದೇವಿಯನ್ನು ಪ್ರತಿಸ್ಥಾಪಿಸಿದರು. ಶ್ರೀ ಗಂಡಿ ಲಕ್ಷ್ಮೀನರಸಿಂಹಸ್ವಾಮಿ ಎಂದು ಕರೆಯುತ್ತಾರೆ.

ಶ್ರೀ ಗಂಡಿ ಲಕ್ಷ್ಮೀನರಸಿಂಹಸ್ವಾಮಿಯ ಜಾತ್ರೆಯು ಹೋಳಿ ಹುಣ್ಣಿಮೆದಿನ ನಡೆಯುತ್ತದೆ. ಮೊದಲ ದಿನವೆ ಕಲ್ಯಾಣ್ಣೋತ್ಸಾವ ಎಂಬ ಧಾರ್ಮಿಕ ಕಾರ್ಯಕ್ರಮವನ್ನು ಜಾತ್ರೆಯಲ್ಲಿ ಮಾಡುತ್ತಾರೆ. ಈ ದೇವಾಲಯ ಸಂಡೂರು ರಾಜ ವಂಶಸ್ಥರಿಗೆ ಸೇರಿರುವುದರಿಂದ ಅರಮನೆಯ ಆಡಳಿತದವರು ಆ ದೇವಾಲಯವನ್ನು ನೋಡಿಕೊಳ್ಳುತ್ತಾರೆ.

ಶ್ರೀ ಗಂಡಿ ಲಕ್ಷ್ಮೀನರಸಿಂಹಸ್ವಾಮಿ ಹೋಳಿ ಹುಣ್ಣಿಮೆ ಜಾತ್ರೆಯಲ್ಲಿ ಮೊದಲಿಗೆ ಲಕ್ಷ್ಮೀ ದೇವತೆಗೆ ಪೂಜೆಯನ್ನು ಮಾಡುತ್ತಾರೆ. ಯಾವುದೇ ರೀತಿಯಲ್ಲಿ ಕೆಟ್ಟ ಪರಿಣಾಮಗಳು ಆಗದಂತೆ ಕಲ್ಯಾಣ್ಣೋತ್ಸಾವ ಕಾರ್ಯಕ್ರಮವನ್ನು ಮಾಡುತ್ತಾರೆ. ಅಂದರೆ

ನರಸಿಂಹಸ್ವಾಮಿಗೆ ಹಾಗೂ ಲಕ್ಷ್ಮೀ ದೇವತೆಗೆ ಮದುವೆ ಮಾಡುತ್ತಾರೆ. ಎಲ್ಲಾ ಭಕ್ತರು ಪಾಲ್ಕಿ ತೆಗೆದುಕೊಂಡು ಅರಮನೆಗೆ ಹೋಗಿ ಅಲ್ಲಿಂದ ಬಂಗಾರದ ಒಡುವೆಗಳನ್ನು ತೆಗೆದುಕೊಂಡು ಬರುತ್ತಾರೆ. ನಂತರ ದೇವಾಲಯದ ಅತ್ತಿರವಿರುವ ಕಲ್ಯಾಣ ಮಂಟಪದಲ್ಲಿ ನರಸಿಂಹಸ್ವಾಮಿ ಹಾಗೂ ಲಕ್ಷ್ಮೀದೇವತೆಗೆ ಮದುವೆಯನ್ನು ಮಾಡುತ್ತಾರೆ. ಮದುವೆಯ ಬ್ಯಾಂಡ್‌ಗಳು ಡೊಲುಗಳಿಂದಕೂಡಿ ಬಹುಸುಂದರವಾಗಿ ಮಾಡುತ್ತಾರೆ. ಅಕ್ಷತೆಯನ್ನು ಭಕ್ತರು ಉಗ್ಗುತ್ತಾರೆ. ನಂತರ ಎಲ್ಲಾರಿಗೂ ಸಿಹಿಊಟದ ವ್ಯವಸ್ಥೆ ಇರುತ್ತದೆ. ಈ ಕಲ್ಯಾಣ್ಣೋತ್ಸಾವ ಕಾರ್ಯಕ್ರಮವು ಜಾತ್ರೆಯಲ್ಲಿ ವಿಶಿಷ್ಟತೆಯಿಂದ ಕೂಡಿದೆ. ಅನೇಕರು ಭಕ್ತಿ –ಭಾವಗಳಿಂದ ಬಂದು ಸೇರುತ್ತಾರೆ.

**೨. ಆಂಜನೇಯ:–**

ಪುರಾಣಗಳು ಹೇಳುವ ಹಾಗೆ ಹನುಮಂತ, ಅಶ್ವಶ್ಥಾಮ, ಬಲಿ, ವ್ಯಾಸ, ವಿಭೀಷಣ, ಕೃಪ, ಪರುಶುರಾಮ ಈ ಏಳು ಜನರು ಚಿರಂಜೀವಿಗಳು. ಇವರುಗಳಲ್ಲಿ ಹನುಮಂತ ಮಾತ್ರ ಜಗತ್ತು ಪ್ರಳಯವಾಗುವವರೆಗೂ ಇರುತ್ತಾನೆ. ಉಳಿದವರೆಲ್ಲರೂ ದೀರ್ಘಾಯುಷಿಗಳು ಮಾತ್ರ.

ಮಾರುತಿ, ವಾಯುಪುತ್ರ, ಹುಲಿಕುಂಟಿರಾಯ; ಎಂದೆಲ್ಲಾ ಕರೆಯಿಸಿಕೊಳ್ಳುವ ಆಂಜನೇಯನನ್ನು ಹನು – ಎಂದರೆ ಉಬ್ಬದ ಗದ್ದ ಅಥವಾ ದವಡೆ, ಊದಿದ ಗದ್ದ ಅರ್ಥಾತ್ ಹನು – ಎಂದರೆ ಅಜಾನುಬಾಹು, ಹನುಮಿಸು – ಎಂದರೆ ನಗೆ, ಹಾರು, ಲಂಘಸು, ಹಾರಾಡು ಎಂಬ ಅರ್ಥಗಳು ಬಂದಿರಬಹುದು. ಹಾಗೆಯೇ ಈತನಿಗೆ ಹಾರಾಡುವ ಆಸಾಧಾರಣ ಶಕ್ತಿ ಇರುವುದರಿಂದಲೇ ಹನುಮಂತ ಎಂಬ ಹೆಸರು ಬಂದಿರಲು ಸಾಧ್ಯವಾಗಿದೆ.

ಹಲವಾರು ಪುಣ್ಯ ನಾಮಗಳಿಂದ ಕರೆಯಿಸಿಕೊಳ್ಳುವ ಆಂಜನೇಯನಿಗೆ ಪೌರಾಣಿಕ ಕತೆಯ ಹಿನ್ನೆಲೆಯಲ್ಲಿ ಅಂಜನಾದೇವಿಯ ಮಗನಾದ್ದರಿಂದ ಆಂಜನೇಯನೆಂಬ ಹೆಸರು ಬಂದಿದ್ದರೆ, ಇನ್ನೊಂದು ಪುರಾಣದಂತೆ ಈತನು

ಗಾಳಿದೇವರಾದ ಮಾರುತನಿಗೆ ಹುಟ್ಟಿದ್ದರಿಂದ ಮಾರುತಿ ಎಂಬ ಹೆಸರು ಬಂದಿರಬಹುದು. ಅಲ್ಲದೆ ಈತನಲ್ಲಿ ಅಂತರಿಕ್ಷದೊಳಗೆ ಹಾರಾಡುವ ವಿಲಕ್ಷಣ ಶಕ್ತಿಯಿರುವುದರಿಂದ ಮಾರುತಿ ಎಂಬ ಹೆಸರು ಬಂದಿರುತ್ತದೆ. ಅಷ್ಟಾಂಗಯೋಗದ ಸಾಧನೆಯಲ್ಲಿಯೂ ಕೂಡ ಸಿದ್ಧ ಪುರುಷನಾದ್ದರಿಂದ ಮುಖ್ಯ ಪ್ರಾಣದೇವ ಎಂದು ಹೆಸರು ಬಂದಿದೆ.

ಪೌರಾಣಿಕ ಕತೆಯಂತೆ ಅಚಿಜನೆಯ ಪುಂಜಿಕ ಸ್ಥಲಿಯೆಂಬ ಅಪ್ಸರಿಯ ಶಾಪದಿಂದ ವಾನರ ಜನ್ಮವನ್ನು ಪಡೆದು ಕೇಸರಿ ಎಂಬ ಕಪಿನಾಯಕನನನ್ನು ಮದುವೆಯಾದಳು ಅಂಜನಾದೇವಿ ಮತ್ತು ಕೇಸರಿ ಇಬ್ಬರೂ ಗಂಧರ್ವ ಲೋಕಕ್ಕೆ ಸೇರಿದವರು. ಸ್ವರದ್ರೂಪಿಯಾದ ಅಂಜನೆಗೆ ಬಹಳ ದಿನಗಳ ಕಾಲ ಮಕ್ಕಳು ಆಗಲಿಲ್ಲವಾದ್ದರಿಂದ ವನದಲ್ಲಿ ತಿರುಗಾಡುತ್ತಿರುವಾಗ ಆಕೆಯ ಸೌಂದರ್ಯಕ್ಕೆ ವಾಯುದೇವನು ಮಾರುಹೋಗಿ ಅವಳೊಂದಿಗೆ ಕೂಡಿದ್ದರಿಂದ ಆಂಜನೇಯ ಅಥವಾ ಮಾರುತಿಯು ಹುಟ್ಟಿದನು ಎನ್ನುವುದು ರಾಮಾಯಣದ ಕತೆಯಾಗಿದೆ. ಕಾರಣ ಈತ ವಾಯುಪುತ್ರನೆನ್ನಬಹುದು.

ವೀರಶೈವ ಪುರಾಣಗಳು ಹನುಮಂತನು ಶಿವನ ಮಗನೆಂದು ಹೇಳುತ್ತಾವೆ. ಕಪಿಗಳ ಕೂಡುವಿಕೆಯನ್ನು ಕಂಡ ಶಿವನು ಕಪಿಗಳು ಕೂಡು ರೀತಿಯಲ್ಲಿ ಪಾರ್ವತಿಯೊಡನೆ ಕೂಡಿದಾಗ ಆಕೆ ಗರ್ಭಧರಿಸುತ್ತಾಳೆ. ಆ ಗರ್ಭದ ಹೊರೆಯನ್ನು ತಾಳಲಾರದೇ ವಾಯುವಿನ ಮುಖಾಂತರ ಕುರುಡಿಯಾದ ಅಂಜನಾದೇವಿಗೆ ತಲುಪಿಸಲು ಹೇಳಿದಾಗ ಅದನ್ನು ಆಕೆ ಸ್ವೀಕರಿಸುತ್ತಾಳೆ. ನಂತರ ಗರ್ಭ ತುಂಬಿ ಅಂಜನಾಳು ಮಗುವಿಗೆ ಜನ್ಮಕೊಡುತ್ತಾಳೆ. ಆ ಮಗುವೇ ಆಂಜನೇಯ ಎಂದು ತಿಳಿಯುತ್ತದೆ. ಈ ಕಾರಣಕ್ಕಾಗಿಯೇ ಶಿವನ ಮಗನಾದ ಆಂಜನೇಯನನ್ನು ಅರ್ಥಾತ್ ಮಂಗನನ್ನು ಕೊಲ್ಲಬಾರದೆಂಬ ನಂಬಿಕೆಯು ರೂಡಿಯಲ್ಲಿದೆ. ಒಂದು ವೇಳೆ ಕೊಂದರೆ ಅದನ್ನು ಆಂಜನೇಯನ ಗುಡಿಗೆ ತಂದು ವಿಧಿವತ್ತಾಗಿ ಅಂತ್ಯಕ್ರಿಯೆ ಮಾಡುವ ಪದ್ಧತಿಯೂ ಇಲ್ಲಿಯವರೆಗೂ ನಡೆದುಕೊಂಡು ಬಂದಿದೆ.

ಅಂಜನಾದೇವಿಯು ಅಹಲ್ಯಾ, ಗೌತಮರ ಮಗಳು. ಅಹಲ್ಯೆಯು ರಗಸ್ಯವಾಗಿ ಇಂದ್ರನಿಂದಲೂ, ಸೂರ್ಯನಿಂದಲೂ ಒಬ್ಬೊಬ್ಬ ಪುತ್ರನನ್ನು ಪಡೆದಳು. ಒಮ್ಮೆ ಗೌತಮ ಮಹರ್ಷಿ ಈ ಮಕ್ಕಳಿಬ್ಬರನ್ನು ಎತ್ತಿಕೊಂಡು ನಡೆಸುತ್ತಾ ಸಮುದ್ರ ತೀರದಲ್ಲಿ ಸಂಚರಿಸುತ್ತಿದ್ದಾಗ ಅಂಜನಾಳು ಈ ಇಬ್ಬರು ಗಂಡು ಮಕ್ಕಳ ಹುಟ್ಟಿನ ರಹಸ್ಯವನ್ನು ಸಪ್ತರ್ಷಿಗಳಲ್ಲಿ ಒಬ್ಬನಾದ ಅತ್ರಿಗೆ ವಿವರಿಸಿದಳು. ಕೂಡಲೇ ಅತ್ರಿಯು "ಆ ಇಬ್ಬರು ಗಂಡು ಮಕ್ಕಳು ನನ್ನ ಮಕ್ಕಳಲ್ಲವಾದರೆ ಕಪಿ ಮುಖರಾಗಲಿ" ಎಂದು ಶಪಿಸಿದ. ಅವರಿಬ್ಬರು ಕಪಿಮುಖರಾದರು. ಇವರೇ ವಾಲಿ ಮತ್ತು ಸುಗ್ರೀವರು. ಬಳಿಕ ತನ್ನ ಗುಟ್ಟನ್ನು ರಟ್ಟು ಮಾಡಿದಳೆಂಬ ಕೋಪದಿಂದ ಅಹಲ್ಯೆಯೂ ತನ್ನ ಮಗಳು ಕುರುಡಿಯಾಗುವಂತೆ ಶಾಪಕೊಟ್ಟಳು. ಅಲ್ಲದೆ ಆಕೆಯ ಹೊಟ್ಟೆಯಲ್ಲಿ ಕಪಿ ಹುಟ್ಟುವಂತೆಯೂ ಶಪಿಸಿದಳು. ಆದಕಾರಣ ಹನುಮಂತನು ಆಕೆಯ ಮಗನಾಗಿ ಜನಿಸಿದ (ತೆಲುಗು ವಚನ ವಿಚಿತ್ರ ರಾಮಾಯಣ)

ಹೀಗೆಲ್ಲಾ ಜನ್ಮ ವೆತ್ತಿದ ಸಾಧ್ಯತೆಗಳಿರುವ ಹನುಮಂತನು ಹನುಮಾನ್, ಮಾರುತಿ, ಆಂಜನೇಯ ಮುಖ್ಯ ಪ್ರಾಣದೇವ ಮುಂತಾದ ಪುಣ್ಯ ನಾಮಗಳಿಂದ ಕರೆಯಿಸಿಕೊಂಡು ದೈವಿಗುಣ ಸಂಪನ್ನನಾಗಿದ್ದಾನೆ. ಈತನು ಅನುಪಮ ಶಕ್ತಿ ಅಸಾಧಾರಣ ಸ್ವಾಮಿ ಭಕ್ತಿ ಹಾಗೂ ರಾಮ ನಾಮ ಜಪದ ತಾರಕನಾಮ ಮಹಿಮೆ ಇವುಗಳ ಮಹಾ ಮಹಾಸಂಗಮದಂತಿದ್ದಾನೆ. "ಎಲ್ಲಿ ರಮನೋ ಅಲ್ಲಿ ಹನುಮನು", "ಉಸಿರೇ ರಾಮ", "ರಾಮನ ಪ್ರಾಣವೇ ಹನುಮ" ಎಂಬುದು ಸಾರ್ಥಕವಾಗಿದೆ.

ವಿಶ್ವ ವಿಖ್ಯಾತ ಖನಿಜ ಸಂಪತ್ತನ್ನು ತನ್ನ ಬೆಟ್ಟಗಳ ಗರ್ಭದಲ್ಲಿ ಹುದುಗಿಸಿಟ್ಟುಕೊಂಡ ಸೊಂಡೂರಿನ ಲೋಹಗಿರಿ ಪರಿಸರದಲ್ಲಿ ಶ್ರೀ ಕಾರ್ತಿಕೇಯ ದೇವಾಲಯ ಸಮುಚ್ಚಯವಲ್ಲದೇ ಇನ್ನೂ ಅನೇಕ ತೀರ್ಥ-ಕ್ಷೇತ್ರಗಳಿದ್ದು ಅವುಗಳಲ್ಲಿ ಶ್ರೀ ರಾಮನಿಂದ ಪ್ರತಿಷ್ಠಾಪಿಸಲ್ಪಟ್ಟು ಅವನಿಂದಲೇ ಪೂಜೆಗೊಂಡ 'ಗಜ ಗೊಂಡದ ಶ್ರೀ ಲಕ್ಷ್ಮೀನರಸಿಂಹಸ್ವಾಮಿ' ದೇವಾಲಯವಾಗಿದೆ. ಆದ್ದರಿಂದ ರಾಮನ ಪರಮ ಭಕ್ತ ಆಂಜನೇಯ ಅಗಿದ್ದಾನೆ. ಶ್ರೀ ಗಂಡಿ ನರಸಿಂಹಸ್ವಾಮಿಗೆ ಆಂಜನೇಯನು

ಸೇವಕನಾಗಿದ್ದಾನೆ. ದೇವಾಲಯದ ಎದುರುಗಡೆ ಆತನ ಮೂರ್ತಿಯನ್ನು ಕಾಣಬಹುದು ಹಾಗೂ ಆಂಜನೇಯ ಗುಡಿಯನ್ನು ಪ್ರತ್ತೇಕವಾಗಿ ನಿರ್ಮಿಸಿದ್ದಾರೆ. ಎಲ್ಲಾ ಊರು ಗುಡಿಗಳು ಒಂದು ದಿಕ್ಕಿನಲ್ಲಿ ಇದ್ದಾರೆ. ಇಲ್ಲಿ ಮಾತ್ರ ಬೇರೆ ದಿಕ್ಕಿಗೆ ಮುಖಮಾಡಿ ಅಂಜನೇಯ ನಿಂತಿದ್ದಾನೆ. ಜಾತ್ರೆಯ ಸಂದರ್ಭದಲ್ಲಿ ಅನ್ನಬಲಿಯ ಧಾರ್ಮಿಕ ಆಚರಣೆ ಆಂಜನೇಯ ದೇವರಿಗಾಗಿ ಎಂದು ತಿಳಿದು ಬರುತ್ತದೆ. ಈ ದೇವಲಾಯದ ಪಕ್ಕ ಜೀವಂತ ಅನೇಕ ಮಂಗಗಳನ್ನು ನಾವು ದೇವಲಾಯದ ಅತ್ತಿರ ಕಾಣಬಹುದು. ಆದ್ದರಿಂದ ಗಂಡಿ ನರಸಿಂಹಸ್ವಾಮಿ ಮತ್ತು ಅಂಜಿನಯನಿಗೆ ಅವಿನಾಭಾವ ಸಂಭಂದವಿದೆ. ವಾರದ ಪ್ರಮುಖ ದಿನ ನರಸಿಂಹಸ್ವಾಮಿಗೆ ಶನಿವಾರ ವಿದ್ದಂತೆ. ಆಂಜನೇಯನಿಗೂ ಸಹ ಶನಿವಾರ ವಾರದ ದಿನವಾಗಿದೆ. ಈ ದೇವಾಲಾಯ ಇರುವುದರಿಂದ ನರಸಿಂಹಸ್ವಾಮಿ ದೇವಲಯಕ್ಕೆ ಹೆಚ್ಚಿನ ಭಕ್ತರು ಬರುತ್ತಾರೆ. ಪೂಜೆ, ಹೋಮಗಳನ್ನು ಮಾಡುತ್ತಾರೆ.

**೩. ಕುಮಾರಸ್ವಾಮಿ:–**

ಸಂಡೂರಿನಲ್ಲಿ ಶ್ರೀ ಕುಮಾರಸ್ವಾಮಿ ದೇವಾಲಯ ಪ್ರಸಿದ್ಧಿ ಪಡೆದಿರುವುದರಿಂದ ಅನೇಕ ದೂರದ ಊರುಗಳಿಂದ ಭಕ್ತರು ಬರುತ್ತಾರೆ. ಈ ದೇವಾಲಯಕ್ಕೆ ಬಂದವರು ಶ್ರೀ ಗಂಡಿನರಸಿಂಹಸ್ವಾಮಿ ದೇವಾಸ್ಥನಕ್ಕೆ ಬಂದವರು ಶ್ರೀ ಗಂಡಿನರಸಿಂಹಸ್ವಾಮಿ ದೇವಾಸ್ಥಾನಕ್ಕೆ ಬರುವ ವಾಡಿಕೆಯಿದೆ. ಕುಮಾರಸ್ವಾಮಿ ದೇವಾಲಯ ಪುರ್ವಾಭಿಮುಖವಾಗಿರುವ ಈ ದೇಗುಲವು ಗರ್ಭಗೃಹ ಮತ್ತು ಸಭಾಮಂಟಪವನ್ನು ಹೊಂದಿದೆ. ಅದೇರೀತಿಯಲ್ಲಿ ನರಸಿಂಹಸ್ವಾಮಿಯ ಗರ್ಭಗೃದಲ್ಲಿ ನಾಲ್ಕು ಕಂಬಗಳನ್ನು ಕಾಣಬಹುದು.

ಅದ್ದರಿಂದ ಶ್ರೀ ಕುಮಾರಸ್ವಾಮಿ ದೇವಲಾಯದಂತೆ ನರಸಿಂಹಸ್ವಾಮಿಯ ಗೋಪುರ ದ್ವಾರಬಾಗಿಲನ್ನು ಕಾಣಬಹುದು. ಶ್ರೀ ಕುಮಾರಸ್ವಾಮಿ ಗರ್ಭಗೃಹದ ಕಂಬಗಳಲ್ಲಿ ಚೌಕಾಕಾರ ಹಾಗೂ ವತರ್ಲಾಕಾರದ ಭಾಗಗಳಿವೆ. ಗರ್ಭ ಗೃಹದ ದ್ವಾರವು ಮಯೂರ, ಗಜ, ಗಿಳಿಗಳ ಕೆತ್ತನೆ ಶಿಲ್ಪಗಳಿಂದಕೂಡಿದೆ.

ಗರ್ಭಗೃಹದಲ್ಲಿರುವ ಸುಮಾರು ನಾಲ್ಕುವರೆ ಅಡಿ ಎತ್ತರವಾದ ಕುಮಾರ ಸ್ವಾಮಿಯು ಸಮಭಂಗಿಯಲ್ಲಿದೆ. ಸುತ್ತಲೂ ಪ್ರಭಾವಳಿ ಹಾಗೂ ಕಿರೀಟ ಮುಕಟವನ್ನು ಹೊಂದಿದೆ. ಈತನು ಒಂದು ಕೈಯಲ್ಲಿ ದಂಡಾಯುಧ, ಇನ್ನೊಂದು ಕೈಯಲ್ಲಿ ಅಭಯ. ಕೈ ಮೇಲೆ ಕ್ರೌಂಚ ಪಕ್ಷಿ ನಿಂತಿದೆ. ಇದರ ಕೆಳಗೆ ರಾಮ,ಲಕ್ಷ್ಮಣರು, ಬಲಬದಿ ಕೆಳಗೆ ಮಯೂರ ಶಿಲ್ಪಗಳನ್ನು ಕಂಡರಿಸಲಾಗಿದೆ. ಸ್ತ್ರೀಯರಿಗೆ ಕುಮಾರಸ್ವಾಮಿಯ ದರ್ಶನ ಅಲಭ್ಯವೆಂದು, ಬಹುದಿನಗಳ ನಂಬಿಕೆ ಇತ್ತು. ಅದಕ್ಕೆ ಪೌರಾಣಿಕಾರಣಗಳನ್ನು ಕೊಡಲಾಗುತ್ತಿತ್ತು. ಆದರೆ. ಈಗ ಎಲ್ಲಾ ಸ್ತ್ರೀಯರು ಮುಕ್ತವಾಗಿ ನೋಡಲು ಅನುವು ಮಾಡಿಕೊಡಲಾಗಿದೆ. ದೇವಾಲಯದ ಹೊರ ಬಿತ್ತಿಯ ಅಧಿಷ್ಠಾನದಲ್ಲಿ ಕುಮುದ ಹಾಗೂ ಚೌಕಗಳು, ಪಟ್ಟಿಕಾ ಭಾಗಗಳು, ಗೋಡೆಯಲ್ಲಿಯ ಎತ್ತರವಾದ ಅರ್ಧಗಂಬಗಳು ದೇವಾಲಯದ ಅಂದವನ್ನು ಹೆಚ್ಚಿಸಿದೆ. ಗರ್ಭಗುಡಿಯ ಮೇಲಿನ ದ್ರಾವಿಡ ಶೈಲಿಯ ಕೂಲ ಶಿಖರದಲ್ಲಿಯ ಹಿತ್ತಾಳೆಯ ಕಳಸವು ಕೆಂಪು ಉಸುಕಿನ ಶಿಲೆಯ ಕಟ್ಟಡಕ್ಕೆ ಸಮ್ಮಿಳಿತ ಗೊಂಡಿದೆ. ಶ್ರೀ ಗಂಡಿ ಲಕ್ಷ್ಮೀನರಸಿಂಹಸ್ವಾಮಿಯ ದೇವಾಲಯ ದ್ವಾರಭಾಗಿಲನ್ನು ಕಾಣಬಹುದು. ದೇವಾಲಯಕ್ಕೆ ಹೊಗುವ ಹಾದಿಯಲೂ ಸುಟ್ಟಕಲ್ಲುಗಳಿಂದ ಮೆಟ್ಟಿಲುಗಳನ್ನು ಹಾಕಲಾಗಿದೆ. ಇವುಗಳನ್ನು ಇತ್ತೀಚಿಗೆ ಹಾಕಲಾಗಿದೆ. ಕುಮಾರಸ್ವಾಮಿ ದೇವಾಲಯದಲ್ಲಿ ರಾಷ್ಟ್ರಕೂಟ, ಹೊಯ್ಸಳ ಹಾಗೂ ವಿಜಯನಗರದ ಅರಸರ ಶಾಸನಗಳಿವೆ. ಒಂದು ಶಾಸನದಲ್ಲಿ ಕ್ರಿ.ಶ. ೧೮೫೪ ರಲ್ಲಿ ಸಕ್ರಪ್ಪ ಮತ್ತು ಕುಮಾರಪ್ಪ ಎಂಬುವರು ಎಂಬುವರು ಎಂಬತ್ತೊಂದು ಸೇರು ತೂಕದ ಜಾಗಟೆ ಮಾಡಿಸಿದ ಉಲ್ಲೇಖವಿದೆ. ಕುಮಾರಸ್ವಾಮಿ ಹಾಗೂ ಪಾರ್ವತಿ ದೇವಾಲಯಗಳು ಇಲ್ಲಿ ಪ್ರಮುಖವಾಗಿದ್ದು, ಜೊತೆಗೆ ಈಶ್ವರ, ನಾಗನಾಥೇಶ್ವರ, ರಂಗನಾಥ, ಪಾತಾಳೇಶ್ವರ ಹಾಗೂಮಾರ್ಗದ ಮಧ್ಯದಲ್ಲಿ ಹರಿಶಂಕರ ದೇವಲಾಯಗಳಿವೆ. ಹರಿಶಂಕರ ದೇವಾಲಯವು ಕಲ್ಯಾಣ ಚಾಲುಕ್ಯರ ಅವಧಿತದ್ದಾಗಿದೆ. ಇದರ ಮುಂದಿರುವ ಜಲಪಾತದಲ್ಲಿ ವರ್ಷವಿಡಿ ನೀರು ಪರ್ವತದ ಬಂಡೆಗಳ ಸಂದುಗಳಿಂದ ಇಳಿದು ಬರುತ್ತದೆ.

## ೪.ರಾಮನಮಲೆ:-

ಕಂಪಿಲರಾಯ ಮತ್ತು ಕುಮಾರ ರಾಮರ ಕಥನವನ್ನು ಸಾರಿ ಹಾಳುವ ಸ್ಮಾರಕಾವಶೇಷಗಳು ಈ ರಾಮನಮಲೆ ದುರ್ಗಸದಲ್ಲಿವೆ. ಇದು ಹೊಸಪೇಟೆ ಹಾಗೂ ಸಂಡೂರಿನ ಮಾರ್ಗದಲ್ಲಿ ಬರುವ ಸುಶೀಲನ ನಗರದ ಪಶ್ಚಿಮಕ್ಕೆ ಬೆಟ್ಟದ ಮೇಲಿದೆ. ಇಲ್ಲಿಯ ರಾಮ ದೇವಾಲಯ ಕಂಪಿಲರಾಯನ ಮಗನಾದ ಕುಮಾರರಾಮನ ಕಾಲದ್ದು. ಇದು ಜೀರ್ಣೋದ್ದಾರಗೊಂಡಿರಬಹುದು. ಇದನ್ನು ಕ್ರಿ.ಶ ೧೫೨೭. ರ ಕೃಷ್ಣ ದೇವರಾಯನ ಅಳ್ವಿಕೆಯಲ್ಲಿ ಗೋಪಾಯ ಮತ್ತು ಆಕೆಯ ತಮ್ಮ ರಾಮಣ್ಣನು. ಕಟ್ಟಿಸಿದಂತೆ ಶಾಸನದಿಂದ ತಿಳಿದು ಬರುತ್ತದೆ. ಇದು ಗರ್ಭಗೃಹ, ಹಾಗೂ ತೆರೆದ ಸಭಾಮಂಟಪವನ್ನು ಹೊಂದಿದೆ ಗರ್ಭಗೃಹದಲ್ಲಿ ರಾಮನ ಶಿಲ್ಪವಿದೆ. ಮುಂದೆ ಗರುಡಗಂಬ, ವೀರಗಲ್ಲುಗಳು ರಾಶಿ, ರಾಶಿಯಾಗಿ ಬಿದ್ದಿವೆ. ಇಲ್ಲಿಯೇ ಹಾಳಾದ ಕೋಟೆ ಸ್ಮಾರಕಾವಶೇಷಗಳು ಕಂಡು ಬರುತ್ತವೆ. ಇದೊಂದು ಬ್ರಿಟೀಷರಿಗೆ ಬೇಸಿಗೆಯ ತಂಗುದಾಣವಾಗಿತ್ತು ಅಂದು.

# ಅಧ್ಯಾಯ – ೬. ಉಪಸಂಹಾರ

ಕೈಗಾರೀಕರಣ ನಗರೀಕರಣದ ವಾಸನೆಯು ಬಡೆದಿರುವ ಈ ಪ್ರಸ್ತುತ ಸಂದರ್ಭದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿನ ಗ್ರಾಮ ದೇವತ್ರೆಯನ್ನು ಒಂದು ಅಧ್ಯಯನ ಶಿಸ್ತಿಗೆ ಒಳಪಡಿಸುವುದರಿಂದ ಆ ಸಮಾಜ, ಆ ದೈವದ, ಆ ಊರಿನ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಇಡೀ ಸಮಾಜದ ಮತ್ತು ಇತರೆ. ದೇವತೆಗಳನ್ನು ಸ್ವಲ್ಪ ಮಟ್ಟಿಗಾದರೂ ಅಧ್ಯಯನ ಮಾಡಿದಂತಾಗುತ್ತದೆ.

ಶ್ರೀ ಗಂಡಿ ಲಕ್ಷ್ಮೀನರಸಿಂಹಸ್ವಾಮಿ ಮೂಲತಃ ದ್ರಾವಿಡದ ದೈವವಾಗಿದ್ದರೂ, ವೈದಿಕರು ಇಂದು ಅನೇಕ ಕಡೆ ಈತನನ್ನು ಹಲವು ಬಗೆಯಲಲ್ಲಿ ಆಚರಿಸುವುದು ಕಂಡುಬರುತ್ತದೆ. ನರಸಿಂಹಸ್ವಾಮಿಯು ಪೌರಾಣಿಕ ಚರಿತ್ರೆಯಂತೆ ಬ್ರಹ್ಮಚಾರಿಯಲ್ಲಿ ಎಂದು ತಿಳಿದು ಬರುತ್ತದೆ. ಇಲ್ಲಿಯ ಒಂದು ಅದ್ಯಯನದಿಂದ ಆಚರಣೆಯಲ್ಲಿ ಮದುವೆಗೆ ಮುನ್ನ ನಾವಿಕ, ವೀರಶೈವರು ಅನೇಕ ಜನಾಂಗದವರು ಶಂಕ ಮತ್ತು ಚಕ್ರದ ಮುದ್ರೆಯನ್ನು ಹಾಕಿಸಿಕೊಳ್ಳುವುದು ತಿಳಿದುಬರುತ್ತದೆ. ನರಸಿಂಹಸ್ವಾಮಿಗೆ ಮಕ್ಕಳಾಗದವರು ಹರಕೆ ಹೋರುವುದು, ಮುಖ್ಯವಾಗಿ ಕಲ್ಲುಮನೆಯನ್ನು ಕಟ್ಟುವುದು, ಮದುವೆಯ ನಂತರ ನರಸಿಂಹಸ್ವಾಮಿಯ ರಥೋತ್ಸವದ ಕಳಶವನ್ನು ಮದುಮಕ್ಕಳು ನೋಡುವುದು ಕಡ್ಡಾಯವಾಗಿದೆ. ಸಂಡೂರು ರಾಜರ ಅಸ್ಥಾನಕ್ಕೆ ಸೇರಿರುವುದರಿಂದ ಈಗಲುಕೂಡ ಅಂದಿನ ಕಾಲದ ರಾಜರ ವೈಭವದಿಂದ ಆಚರಣೆಯನ್ನು ಮಾಡುತ್ತಾರೆ. ಸಂಘ ಸಂಸ್ಥೆಗಳೂ, ಗಣಿಮಾಲಿಕರೂ, ರೈತರು ಅನೇಕ ಊರುಗಳಿಂದ ಬಂದ ಭಕ್ತರು ಇತನ ಧಾರ್ಮಿಕ ಆಚರಣೆಗೆ ಕೈ ಜೋಡಿಸುತ್ತಾರೆ.

ನರಸಿಂಹಸ್ವಾಮಿ ಸಂಬಂದಿಸಿದ ಹಾಗೆ ಹಿಂದಿನ ಕಾಲದಿಂದಲೂ ವಿವಿಧ ರೀತಿಯ ಆಚರಣೆಗಳು ನಡಿಯುತ್ತಲಿವೆ. ಉತ್ತರ ಕರ್ನಾಟಕದಲ್ಲಿಯಂತೂ ಈ

ತನಿಗೆ ವಿಶೇಷ ಸ್ಥಾನವಿದೆ. ಈತನು ಜಾತಿ – ಜನಾಂಗಗಳ ಭೇದವಿಲ್ಲದೆ ಎಲ್ಲರಿಗೂ ಬೇಕಾದ ದೈವ. ಅದರಲ್ಲಿಯೂ ಜನಾಂಗದವರಾದ ನಾಯಕರಿಗೆ ಈತನೇ ಮನೆದೇವರು. ಗ್ರಾಮದ ಇತರೆ ದೇವರುಗಳಿಗಿಂತ ನಮ್ಮ ಜನಪದರು ಈತನನ್ನೆ ಹೆಚ್ಚು ಪೂಜಿಸುವುದು ವಾಡಿಕೆಯಿದೆ. ನರಸಿಂಹ ಸ್ವಾಮಿಗೆ ನಮ್ಮ ಜನಪದರು ನಾಯಕನ ಸ್ಥಾನ ಕೊಟ್ಟಿದ್ದಾರೆ.

ನರಸಿಂಹಸ್ವಾಮಿ ಕುರಿತು ಬಹಳಷ್ಟು ಆಚರಣೆಗಳಲ್ಲಿ ಹೋಳಿ ಹುಣ್ಣಿಮೆಯಲ್ಲಿ ನಡೆಯುವ ಕಲ್ಯಾಣೋತ್ಸವ ಹಾಗೂ ಬ್ಯಾಟಿಗಿಡ ಹೆಚ್ಚು ಪ್ರಾಶಸ್ತ್ಯವಿದೆ. ಇಂದು ಸಮಯದ ಅಭಾವವನ್ನು ಅನುಭವಿಸುತ್ತಿರುವ ಜಾಗತೀಕರಣಕ್ಕೆ, ಕೈಗಾರಿಕರಣಕ್ಕೆ ಒಳಗಾಗಿರುವುದರಿಂದ ಇಂತಹ ಬಹಳಷ್ಟು ಆಚರಣೆಗಳು ಕಡಿಮೆಯಾಗುತ್ತಾ ಬಂದಿವೆ. ಯುಗಾದಿ, ಪಂಚಮಿ, ದಸರ ಮತ್ತು ಮದುವೆ – ಮುಂಜಿಗಳಲ್ಲಿ ವಾರಗಟ್ಟಲೆ ಒಂದಡೆ ಸೇರಿ ಆಚರಿಸುತ್ತಿರುವಂತಹ ಆಚರಣೆಗಳು, ಕಾರ್ಯಕ್ರಮಗಳು ಇಂದು ಸಂಕುಚಿತಗೊಳ್ಳುತ್ತಿವೆ. ಎನಿಸುತ್ತದೆ. ಇವುಗಳಲ್ಲಿ ಬಹಳಷ್ಟು ಬದಲಾವಣೆ ಇಂದು ಕಂಡು ಬಂದು ಒಂದೆರಡು ದಿನದಲ್ಲಿಯೇ ಮುಗಿಸಿ ಬಿಡುವ ಸ್ಥಿತಿಗೆ ಇಂದು ಜನರು ಬಂದು ನಿಂತಿದ್ದಾರೆ.

ಹೆಜ್ಜೆ – ಹೆಜ್ಜೆಗೆ ವೈಜ್ಞಾನಿಕ ದೃಷ್ಟಿಕೋನದಿಂದ ನೋಡುವ ಜನರು ಇಂದು ಬ್ಯಟಿಮರ ಪವಾಡದಂತ ಆಚರಣೆಯಲ್ಲಿ ಏನು ಹುರುಳಿಲ್ಲ ಎಂದು ನಂಬಿಕೆಯನ್ನು ಕಳೆದುಕೊಳ್ಳುತ್ತಿರುವ ಸಮಯದಲ್ಲಿ ಪವಾಡ ಮಾಡುವ ವ್ಯಕ್ತಿಯನ್ನು ಪವಾಡಮಾಡುವಂತಹ ಸಮಯದಲ್ಲಿ ಭಕಿಯಿಂದ ಗೌರವದಿಂದ ಆತನಿಗೆ ಮೈಮರೆತು ಕ:ಕೈಮುಗಿಯುವುದನ್ನು ನಾವು ಕಾಣಬಹುದು. ಪವಾಡ ಮಾಡುವಂತಹ ವ್ಯಕ್ತಿಯು ಸಾಕ್ಷಾತ್ ನರಸಿಂಹಸ್ವಾಮಿಯ ಅವತಾರದಂತೆ ಕಂಡರೂ ಆತ ಸಾಮಾಜಿಕ ಜೀವನದೊಳಗೆ ಮದುವೆ, ಮಕ್ಕಳನ್ನು ಮಾಡಿಕೊಂಡೆ ಬಂದಿದ್ದಾನೆ. ಈತನು ಸಮಾಜದಲ್ಲಿ ಒಳ್ಳೆಯ ಸ್ಥಾನದಲ್ಲಿರುತ್ತಾನೆ. ಈತನ ಕೆಟ್ಟ ಪ್ರವೃತ್ತಿಗಳನ್ನು ನಮ್ಮ ಜನಪದರು ಸಹಿಸರು. ಈತನಿಗೆ ಹಲವಾರು ನಿರ್ಭಂದಗಳು ಇರುತ್ತಾವೆ. ಸಾಮಾನ್ಯವಾದ ದಿನಗಳಲ್ಲಿ ಈತನನ್ನು ಸಾಮಾನ್ಯಯರಂತೆಯೇ ಕಾಣುತ್ತಾರೆ.

ಸಂಡೂರು ಕ್ಷೇತ್ರದ ಶ್ರೀ ಗಂಡಿ ಲಕ್ಷ್ಮೀನರಸಿಂಹಸ್ವಾಮಿಯ ಅಧ್ಯಯನಕ್ಕೆ ತೊಡಗಿದಾಗ ಅಲ್ಲಿ ಆ ಊರಿನ ಐತಿಹಾಸಿಕ ಮತ್ತು ಭೌಗೋಳಿಕ ಪರಿಸರ ಪೂರ್ಣ ಪರಿಚಯವು ಆದಂತಾಯಿತು. ಅಲ್ಲದೆ ಅಲ್ಲಿನ ಜನರ ಜನ ಜೀವನ ಅವನತಿ ಹೊಂದುತ್ತಿರುವ ಗುಡಿ ಕೈಗಾರಿಕೆಗಳು, ಕಲಾವಿದರು, ಹಾಡುಗಾರರು ಮತ್ತು ಆ ಊರಿನ ಬಿಡಿ – ಬಿಡಿಯಾದ, ಇಡಿಯಾದ ಪರಿಚಯವು ದೊರೆಯುತ್ತದೆ. ಅಂತೆಯೇ ಈ ಅಧ್ಯಯನದಲ್ಲಿ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಸಂಡೂರಿನ ಹಿನ್ನೆಲೆ, ಐತಿಹಾಸಿಕತೆ, ಭೌಗೋಳಿಕತೆ ಮತ್ತು ಅಲ್ಲಿನ ಆಚರಣೆಗಳಾದ ಜೀವನಾವರ್ತನದ ಆಚರಣೆಗಳಲು ವಾರ್ಷಿಕಾವರ್ತನದ ಆಚರಣೆಗಳು ನರಸಿಂಹಸ್ವಾಮಿ ಪೂಜೆ, ದೇವಸ್ಥಾನದ ಸ್ಥಾಪನೆಯ ವಿವರ ಆಸ್ತಿ – ಪಾಸ್ತಿ, ಆಡಳಿತ ಮುಂತಾದ ವಿವರಗಳನ್ನು ಕುರಿತು ವಿವರಣೆ ದೊರೆಯುತ್ತದೆ.

ಸಂಡೂರು ಕ್ಷೇತ್ರದ ಶ್ರೀ ಗಂಡಿ ಲಕ್ಷ್ಮೀನರಸೀಹಸ್ವಾಮಿ ಸಾಂಸ್ಕೃತಿಕ ಅಧ್ಯಯನವನ್ನು ನೋಡಿದರೆ ಇದು ರಮಾಯಣದ ಹಲವಾರು ಘಟನಾವಳಿಗಳನ್ನು ವಿವರಿಸುವಂತಹ ಅಂಶಗಳನ್ನು ಒಳಗೊಂಡಿದೆ. ಈ ರೀತಿಯ ಗ್ರಾಮದೇವತೆಗಳ ಆಚರಣಾತ್ಮಾಕ ಅಧ್ಯಯನದಿಂದ ಜನಪದರ ಸತ್ತ್ಯಾಂಶಗಳನ್ನು ತಿಳಿಯಬಹುದು. ನರಸಿಂಹಸ್ವಾಮಿಯು ದ್ರಾವಿಡರ ದೈವವಾಗಿದ್ದರೂ ವೈದಿಕರು ಆಚರಿಸುತ್ತಾ, ಬಂದಿರುವುದು ಬ್ಯಾಟಿಮರ ಪವಾಡದಂತಹ ಆಚರಣೆಗಳು ಇಂದಿಗೂ ಜೀವಂತವಾಗಿವೆ. ನರಸಿಂಹಸ್ವಾಮಿ ಬ್ರಹ್ಮಚಾರಿಯಾಗದಿದ್ದರಿಂದ ಮದುವೆಯಲ್ಲಿ ಈತನಿಗೆ ವಿಶೇಷಸ್ಥಾನ. ಮದುವೆಗೆ ಮುನ್ನ ಈತನನ್ನು ಆರಾದಿಸುವುದು, ಮುದ್ರೆಯನ್ನು ಹಾಕಿಸಿಕೊಂಡು ಈತನ ದಾಸನೆಂತಿಳಿದು ಬರುತ್ತದೆ. ಹೋಳಿ ಹುಣ್ಣಿಮೆ ಜಾತ್ರೆಯಲ್ಲಿ ಕಲ್ಯಾಣ್ಣೋತ್ಸವ, ಅನ್ನದಾಸೋಹ, ಬ್ಯಾಟಿಮರ, ತೇರು ಮುಂತಾದ ಅಂಶಗಳನ್ನು ನಾವು ಈ ಅಧ್ಯಯನದಿಂದ ಕಂಡು ಕೊಳ್ಳಬಹುದು. ಈ ಅಧ್ಯಯನವನ್ನು ನಾವು ಹಿಡಿಯಾಗಿ ಅವಲೋಕಿಸಿದಾಗ ಇತರೆ ಗ್ರಾಮಗಳಲ್ಲಿ ಆಚರಿಸುವ ಆಚರಣೆಗಳಿಗಿಂತ ಸಂಡೂರಿನಲ್ಲಿ ವಿಶೇಷವಾಗಿ ಆಚರಿ ಸಲ್ಪಡುತ್ತವೆ ಎನ್ನುವುದು ತಿಳಿಯುತ್ತದೆ.

ಈ ರೀತಿಯಾದ ಅಧ್ಯಯನವು ಸಂಪೂರ್ಣ ಕ್ಷೇತ್ರಕಾರ್ಯಕ್ಕೆ ಸಂಬಂಧಿಸಿದ್ದಾಗಿದ್ದು, ಅಗತ್ಯವಿರುವಲ್ಲಿ ಗ್ರಂಥಗಳ ಬಳಕೆಯನ್ನ ಮಾಡಿಕೊಂಡು ಈ ಅಧ್ಯಯನಕ್ಕೆ ಕೂಡಿಹಾಕಿದ ಮಾಹಿತಿಯನ್ನು ಸಂಪೂರ್ಣವಾಗಿ ವೈಜ್ಞಾನಿಕ ವಿಶ್ಲೇಷಣೆಗೆ ತೊಡಗಿಸಿದ್ದೇನೆ ಎನ್ನುವುದನ್ನು ಒಪ್ಪಿಕೊಳ್ಳಲಾರೆ ಆದರೂ, ಮೇಲಿನ ಎಲ್ಲ ಅಂಶಗಳು ಅಧ್ಯಯನದ ಮುಖ್ಯ ಉದ್ದೇಶಗಳಾಗಿ ಮೂಡಿ ಬಂದಿವೆ. ಗ್ರಾಮಧ್ಯಯನದಲ್ಲಿ ಒಂದು ಗ್ರಾಮದ ಸಾಸ್ಕೃತಿಕ ಅಧ್ಯಯನ, ಗ್ರಾಮೀಣ ಸಮುದಾಯ ಉದ್ಯೋಗ, ಉದ್ಯೋಗ, ವ್ಯವಹಾರ, ಊಟ, ಉಡುಗೆ,ಮನರಂಜನೆ, ಆಚರಣೆ, ನಂಬಿಕೆ, ಸಂಪ್ರದಾಯ ಒಟ್ಟಾರೆ ಗ್ರಾಮೀಣ ಬದುಕೆಲ್ಲ ಇದರ ತೆಕ್ಕೆಗೆ ಸಿಗುತ್ತದೆ. ಪ್ರವಾಸಿಗಳಿಗೆ ಇದೊಂದು ತಣ್ಣನೆಯ ತಂಗುದಾಣವಾಗಿದೆ. ಶಂಕರನ ತಪಸ್ಸು ಭಂಗ ಮಾಡಿದಾಗ ತನ್ನ ಮೂರನೆಯ ಕಣ್ಣಿನಿಂದ ಮನ್ಮಥನನ್ನು ಭಸ್ಮಮಾಡುತ್ತಾನೆ. ಈ ಹರಿಯು ಶಂಕರನ ದರ್ಶನ ಮಾಡಿ ತನ್ನ ಪುತ್ರನನ್ನು ಪುನಃ ದಯಪಾಲಿಸಬೇಕೆಂದು ಪ್ರಾರ್ಥಿಸುತ್ತಾನೆ. ಆಗ ಶಂಕರ ಶ್ರೀಹರಿಗೆ ಲೋಹಾಚಲದಲ್ಲಿ ಹರಿಯು ತಪಸ್ಸು ಕೈಗೊಳ್ಳು ನಿನ್ನ ಇಷ್ಟಾರ್ಥ ಸಿದ್ದಿಯಾಗುತ್ತದೆ. ಎಂದು ಹೇಳಿದನು. ಆಗ ಶ್ರೀ ಹರಿಯು ಲೋಗಾಚಲಕ್ಕೆ ಬಂದು ತನ್ನ ಗದೆಯಿಂದ ಹೊಡೆದು ತೀರ್ಥವನ್ನು ನಿರ್ಮಾಣಮಾಡಿ ಅದರಲ್ಲಿ ತ್ರಿಕಾಲ ಸ್ನಾನಮಾಡಿ ಈಶ್ವರನನ್ನು ಪ್ರಾರ್ಥಿಸುತ್ತಾನೆ. ಹೀಗಾಗಿ ಬೆಟ್ಟದ ಮೇಲಿನಿಂದ ಸದಾಕಾಲ ಈ ತೀರ್ಥಕ್ಕೆ ನೀರು ಹರಿದು ಬರುತ್ತದೆ. ಎಂಬ ನಂಬಿಕೆ ಇದೆ. ಇಲ್ಲಿಯ ದೇವಾಲಯವು ಗರ್ಭಗೃಹ, ಸಭಾ ಮಂಟಪಗಳಿಂದ ಕೂಡಿದ್ದು ಮರಳು ಮಿಶ್ರಿತ ಕೆಂಪು ಶಿಲೆಯಿಂದ ರೂಪಹೊಂಡಿದೆ.

ಶ್ರಾವಣ ಮಾಸದಲ್ಲಿ ಕುಮಾರಸ್ವಾಮಿಗೆ ಮೂರನೆ ಸೋಮವಾರ ಭಕ್ತರು ಬರುತ್ತಾರೆ. ಅದೇರೀತಿಯಾಗಿ ಶ್ರಾವಣ ಮಾಸದ ಸಂದರ್ಭದಲ್ಲಿ ಮೂರನೆ ಶನಿವಾರ ಭಕ್ತರು ಶ್ರೀ ಗಂಡಿ ನರಸಿಂಹಸ್ವಾಮಿಗೆ ಬರುತ್ತಾರೆ. ಈ ರೀತಿಯಾಗಿ ಕುಮಾರಸ್ವಾಮಿ ಹಾಗು ನರಸಿಂಹಸ್ವಾಮಿ ಒಂದೇ ಆಡಳಿತಕ್ಕೆ ಸೇರಿದ್ದಾವೆ. ಪೂಜೆ – ಪುನಸ್ಕಾರಗಳು ಒಂದೆಭಗೆಯಲ್ಲಿ ಜರುಗುತ್ತವೆ.

# ಅಧ್ಯಾಯ–೭
# ಅನುಬಂಧ

## ೧. ವಕ್ತೃವಿವರ

| ಕ್ರ.ಸಂ | ಹೆಸರು | ವಯಸ್ಸು | ವಿದ್ಯಾಭ್ಯಾಸ | ವೃತ್ತಿ | ಜಾತಿ | ವಾಸಸ್ಥಳ |
|---|---|---|---|---|---|---|
| ೦೧ | ಬಸಣ್ಣ | ೩೫ | ಎಂ.ಫಿಲ್ | ಕಾರ್ಮಿಕ | ವೀರಶೈವ | ಧರ್ಮಾಪುರ |
| ೦೨ | ವೀರಸ್ವಾಮಿ | ೪೦ | ಬಿ.ಎ | ಗುಮಾಸ್ತ | ಮಡಿವಾಳ | ಸಂಡೂರು |
| ೦೩ | ಚಂದ್ರಪ್ಪ.ಎಸ್ | ೩೨ | ಬಿ.ಎ | ಗುಮಾಸ್ತ | – | ದೌವಲತ್ತುಪುರ |
| ೦೪ | ಜಂಬಣ್ಣ | ೪೩ | – | ವ್ಯಾಪಾರ | ಹರಿಜನ | ಸುಶೀಲನಗರ |
| ೦೫ | ಯೋಗೇಶ್ | ೨೮ | ಎಂ.ಎ | ಸಂಶೋಧಕ | ಹರಿಜನ | ರಾಂಪುರ |
| ೦೬ | ಸೋಮಶೇಖರ್ | ೨೮ | ಎಲ್.ಎಲ್.ಬಿ | ವಕೀಲರು | ಹರಿಜನ | ಸುಶೀಲನಗರ |
| ೦೭ | ಲಕ್ಷ್ಮಣ | ೩೦ | – | ಕೃಷಿ | ಹರಿಜನ | ಸುಶೀಲನಗರ |
| ೦೮ | ನರಸಪ್ಪ | ೩೫ | – | ಕೃಷಿ | ನಾಯಕ | ಧರ್ಮಾಪುರ |
| ೦೯ | ಜಿ.ಸಿದ್ದಪ್ಪ | ೩೮ | – | ಕೃಷಿ | ವೀರಶೈವ | ಧರ್ಮಾಪುರ |
| ೧೦ | ಎಂ. ಕುಲಕರ್ಣಿ | ೩೯ | – | – | ಬ್ರಾಹ್ಮಣ | ಧರ್ಮಾಪುರ |
| ೧೧ | ಆರ್. ಮುನೀರ್ | ೨೮ | ಬಿ.ಕಾಂ | ನೌಕರ | ಮುಸ್ಲಿಂ | ಸುಬ್ರನಹಳ್ಳಿ |
| ೧೨ | ಕುಮಾರಸ್ವಾಮಿ | ೩೫ | ೧೦ನೇ | ಚಾಲಕ | ನಾಯಕ | ಲಕ್ಷ್ಮೀಪುರ |
| ೧೩ | ಶಿವಾನಂದ | ೨೮ | ಬಿ.ಎ | ಕಾರ್ಮಿಕ | ನಾಯಕ | ಲಕ್ಷ್ಮೀಪುರ |
| ೧೪ | ಪರಿಕ್ಷಿತ್ | ೨೮ | ಬಿ.ಎ | ಕಾರ್ಮಿಕ | ಬಡಿಗೇರು | ಲಕ್ಷ್ಮೀಪುರ |
| ೧೫ | ನಾಗರಾಜ.ವಿ | ೨೭ | ಪಿ.ಯು.ಸಿ | ಕಾರ್ಮಿಕ | – | ಸಂಡೂರು |
| ೧೬ | ವೀರೇಶ್.ಎನ್ | ೨೪ | ಬಿ.ಕಾಂ | – | ಹರಿಜನ | ಕಮಲಾಪುರ |
| ೧೭ | ಮಹಾದೇವಪ್ಪ | ೩೦ | ಬಿ.ಎ | ಕಾರ್ಮಿಕ | ಹರಿಜನ | ಸುಶೀಲನಗರ |
| ೧೮ | ಗಂಗಮ್ಮ | ೩೫ | – | ಕೂಲಿ | ಹರಿಜನ | ಸುಶೀಲನಗರ |
| ೧೯ | ಈರಮ್ಮ | ೨೭ | ೭ನೇ | ಕೂಲಿ | ಹರಿಜನ | ಸಂಡೂರು |
| ೨೦ | ಕುಮಾರಸ್ವಾಮಿ | ೩೩ | – | ಕೃಷಿ | ನಾಯಕ | ಸಂಡೂರು |

# ಗ್ರಂಥಗಳು – ೦೨

೧. ಕೃಷ್ಣಮೂರ್ತಿ ಅಗ್ರಹಾರ, ಡಿ.ಆರ್.ನಾಗರಾಜ ಸಂಸ್ಕೃತಿ ಕಥನ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೨೦೦೨
೨. ಗುರುಪ್ರಸಾದ್ ಸಿ.ಟಿ ಏಳು ಊರಿನ ದೇವತೆಗಳು ಒಂದು ಅಧ್ಯಯನ ಪ್ರಾಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೫
೩. ಗುರುಪ್ರಸಾದ್ ಸಿ.ಟಿ ಕನ್ನಡ ಜಾನಪದ ಗ್ರಂಥ ಸೂಚಿ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦
೪. ಚಿದಾನಂದ ಮೂರ್ತಿ ಜನ–ಜನಪದ ಜಾನಪದ, ಸ್ವಪ್ನ ಬುಕ್‌ಹೌಸ್ ಬೆಂಗಳೂರು ೨೦೦೨
೫. ಜೋಗನ್ ಶಂಕರ್ ಗ್ರಾಮ ಸಮಾಜ ಜೀವ ಪ್ರಕಾಶನ ಮೈಸೂರು ೧೯೯೫
೬. ಮಂಜುನಾಥ ಬೇವಿನಕಟ್ಟೆ ಜನಪದ ನಂಬಿಕೆಗಳು ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೬
೭. ಮೊಗಳ್ಳಿ ಗಣೇಶ್ ಮೌಖಿಕ ಕಥನ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೬
೮. ನಾಗೇಶ್.ಕೆ ಹೆಬ್ಬಾಲೆ ಜಾನಪದ ಬನಸಿರಿ ರುಚಿತಾ ಪ್ರಕಾಶನ ಹೊಸಪೇಟೆ ೨೦೦೨
೯. ರಮೇಶ ಸ.ಚಿ ನೀರು ಜಾನಪದ ನೋಟ
೧೦.ರಮೇಶ್ ಸ.ಚಿ ಅಲೆಮಾರಿಗಳ ಸ್ಥಿತಿಗತಿ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೫
೧೧ ರಮೇಶ ಸ.ಚಿ ಬುನಾದಿ ಅಂಶು ಪ್ರಕಾಶನ ಹೊಸಪೇಟೆ, ೨೦೦೫
೧೨ ಲೋಹಾದ್ರಿಯ ಮಡಿಲು ೨೦೦೪, ಕನ್ನಡ ಸಾಹಿತ್ಯ ಪರಿಷತ್ತು, ತಾಲೂಕು ಘಲಕ ಸಂಡೂರು
೧೩ ಸ್.ಜೆ. ಕೋಡಿಹಲ ಸಂಡೂರು ಸಿರಿ. ೨೦೦೦
೧೪ ಜಾನಪದ ಸಾಹಿತ್ಯ ದರ್ಶನ, ಡಾ॥ ಎಂ.ಬಿ. ಕೊಟ್ರಶೆಟ್ಟಿ
೧೫ ಸಂಡೂರು ಭೂಹೋರಾಟ, ಅರುಣ ಜೋಳದ ಕೂಡ್ಲಿಗಿ
೧೬ ಸಂಡೂರಿನ ವೀರ ಶೈವ ಸಮುದಾಯದ ಆಚರಣೆಗಳು, ಜಿ.ಹೇಮಲತಾ ಅವರ ಎಂ.ಫಿಲ್ ಪ್ರಬಂಧ
೧೭ ಸಂಡೂರು ಪರಿಸರದ ಗ್ರಾಮ ದೈವಗಳು, ಸವಿತಾ ಅವರ ಎಂ.ಫಿಲ್ ಪ್ರಬಂಧ
೧೮ ಕಾರ್ತಿಕಾಯಣ, ಡಾ॥ ವೃಷಂಭೇದ್ರಾಚಾರ್
೧೯ ಸಂಡೂರು ಪರಿಸರದ ಶಾಸನಗಳು ಮತ್ತು ಉಲ್ಲೇಖಿತ ದೇವಾಲಯಗಳು, ಗಿರಿಜಾ ಅವರ ಎಂ.ಫಿಲ್ ಪ್ರಬಂಧ
೨೦ ಕೋಗಳಿ ಆಂಜನೇಯ ಸಂಕಥನ, ಪ್ರೇಮಾನಂದ.ಬಿ ಎಂ.ಫಿಲ್



ಶ್ರೀಗಂಡಿ ಲಕ್ಷ್ಮಿ ನರಸಿಂಹಸ್ವಾಮಿಯ ಮೂರ್ತಿ



ಶ್ರೀಗಂಡಿ ನರಸಿಂಹಸ್ವಾಮಿಯ ಅರ್ಚಕರು



ಬ್ಯಾಟಿಮರ ತರುವುದು



ಶ್ರೀಗಂಡಿ ಲಕ್ಷ್ಮಿನರಸಿಂಹಸ್ವಾಮಿಯ ದೇವಾಲಯ



ನಾರಿಹಳ್ಳ ಒಂದು ನೋಟ



ಕುಮಾರ ಸ್ವಾಮಿಯ ದೇವಾಲಯ

